**ಕೊರಿಪೋಗು** (ಕ್ರಿ). ಕತ್ತರಿಸಿಹೋಗು; ನಿಂತುಹೋಗು: ಅಟಿಕ್ತೋನ್ ಪಣ್ಚು ಮಹಾಪಾಕ್ಕು ಒಕ್ಕಲ್ಕೊರಿಪೋಗುಗೆ (ಎಕ. XIV, ತಿರುಮ. ೧೫೧–೯; ?). [< ಕೊಱು$_5$ + ಪೋಗು$_1$]

**ಕೊರಿಯಿಸು** 'ಕೊಱಿಸು' ನೋ.

**ಕೊರಿವಿ** 'ಕೊಱವಿ' ನೋ.

**ಕೊರುಮಲ್ಲಿ** (ನಾ). ಒಂದು ಊರಿನ ಹೆಸರು: ಅಗ್ರಹಾರೀಕೃತಃ ಕೊರುಮಲ್ಲಿನಾಮಾ ಗ್ರಾಮಃ (ಇಆ. XIV, ೫೪–೧೦೩; 944). [?]

**ಕೊರುಜಿ** (ನಾ). (?): ಮಹಾದೇವರ ದೇವದಾವಿನಲ್ಕಾಪತ್ರರ ಲೊಂದು ಕೊರುಜಿ ಊರಲೊಕ್ಕಲಲೊನ್ದು ಪೊಱೆಯುಂ ಪತ್ತು ಕೊಳಗ ಭತ್ತಮುಂ (ಮೈಆರಿ. ೯೯೪೭, ೨೫–೧೭; 1032). [?]

**ಕೊರೆ$_1$** 'ಕೊಱೆ$_1$' ನೋ.

**ಕೊರೆ$_2$, ಗೊರೆ$_1$** (ಕ್ರಿ). ಗೊರಕೆ ಹೊಡೆ: "ಕೊರೆ–ನಿದ್ರಾಂಗ ಧ್ವನೌ" (ಗೊರಕೆಹೊಡೆ)" (ಶಮಧಾ); ಕೊರೆವೊಡೆ ಬೆಟ್ಟುಗಳ್ ಬಿರಿವುವುಣ್ಮುವ ಲಾಳೆಯ ಲೋಳೆಗಳ್ ಪೊನಲ್ಪರಿವುವು (ಪಂಪಭಾ. ೪–೧೦೦); ಕೊರೆದುಂ ಸುಯ್ದುಂ . . . ನಿದ್ರೆಯನೆ ಕೆಡಿಪ (ಧರ್ಮಾಮೃ. ೨–೫೪). ಗೊರೆ$_1$: ಕೋಟಿ ಡಿಂಡಿಮುಗಳನು ಬಾರಿಸೆ ಗೋಟು ತುಂಬಿತು ಜಗದ ಕಿವಿಗಳ ಪಾಟ ಹೊಟ್ಟೆತು ಕೇಳನಾ ಖಳಗೊರೆದು ತೆಕ್ಕುತಿರೆ (ಕಾಶಿರಾ. ೨೪–೪); ಸರಿಯಾದ ಜೋಡಿಯೆ ಈ ಗಂಡಹೆಂಡಿರು . . . ಆಹುದಹುದೆಂದನು ಗೊರೆಯುವನೀತನು ಈಕೆಯೊ ಶತಕೆಪ್ಪಿಯಂತೆ (ಇಂಚಾಪ.೧೨೭–೨೫); ನಾನಾಸಾಹೇಬ ಸ್ವಲ್ಪದೂರದಲ್ಲಿ ಮಲಗಿಕೊಂಡು ಸೂರು ಹಾರಿಹೋಗುವ ಹಾಗೆ ಗೊರೆಯುತ್ತಿದ್ದ (ಬದುಜ. ೧೭೧). [?]

**ಕೊರೆ$_3$** 'ಕೊಱೆ$_4$' ನೋ.

**ಕೊರೆ$_4$** 'ಕೊಱೆ$_5$' ನೋ.

**ಕೊರೆ$_5$** 'ಕೊಱೆ$_6$' ನೋ.

**ಕೊರೆ$_6$** 'ಕೂಱೆ' ನೋ.

**ಕೊರೆ$_7$** (ನಾ). ದಂಡೆ; ತೀರ; ತಟ: ಸರ್ವರೂ ಗೊಬ್ಬರವನ್ನು ಕೂಡಿಸಿ ತಮ್ಮ ಹೊಲಗಳಿಗೂ ತೋಟಗಳಿಗೂ ಕೆರೆ ಕೊರೆಗಳಿಗೂ. . . ಹಾಕಬೇಕು (ಕೃಷಿಪ್ರ. ೪೭); ಗರಸಿನ ಕೊರೆಯ ಮೇಲೆ ಒಂದೆರಡು ಸಲ ಅವರಕಾಲು ತುಳಿದು ಸರ್ರನೆ ಜಾರುವಂತಿತ್ತು (ರಕ್ತಧ್ವ. ೧೫೨). [< ಕೋರೆ ?]

**ಕೊರೆಕಂಬಿ** (ನಾ). ಕೊರೆಯುವ ಸಾಧನ: "ತೆಳುವಾದ ಮೊನೆ ಸಲ ಕರಣೆ; ಕೊರೆಕಂಬಿ" (Stylet. ಇಂಕನಿ).
[ಕೊರೆ$_1$ (< ಕೊಱೆ$_1$) + ಕಂಬಿ$_1$]

**ಕೊರೆಕರೆ** (ನಾ). ಕೊರೆಯುವ ಅಂಚು; ಮೊನಚಾದ ತುದಿ (?): ಅಲ್ಲಿಬಯಕೆ ಸಲಾಕೆ ಮೇಲೆ ತೇಲುವ ಹೆಣ್ಣುಕಣ್ಣುಕೊರೆಕರೆ ಮಾಯೆಗನ್ನಡಿಯಲಿ ತೆರೆತೆರೆವ ಸರಿವ ಹೊಸ ಹೊಸ ಲೋಕಲಾಳಿಯಲಿ ಇಂದ್ರಜಾಲದ ಮಿಂಚುದಾರಗಳಲಿ (ನಡೆಬಂ. ೪೦–೬).
[ಕೊರೆ$_1$ (< ಕೊಱೆ$_1$) + ಕರೆ$_4$]

**ಕೊರೆತ** 'ಕೊಱೆತ' ನೋ.

**ಕೊರೆದಿನ** (ನಾ). (ಕೆಲಸಗಾರನು) ಕೆಲಸಕ್ಕೆ ಬಾರದೆ ತಪ್ಪಿಸಿಕೊಂಡದಿನ, —ಉಳಿದ ದಿನ: (ಕ).
[ಕೊರೆ$_3$ (< ಕೊಱೆ$_4$) + ದಿನ]

**ಕೊರೆನೋಟ** (ನಾ). ತೀಕ್ಷ್ಣವಾದ ನೋಟ; ಹರಿತವಾದ ದೃಷ್ಟಿ: ಸಾಣೆಯೊಳ್ ತೀಡಿದ ಮಾರನ ತೀರಿನಂತಿರುವ ಕೊರೆನೋಟ (ಸೌಗಂಧಿ. ೨೨೪–೬). [ಕೊರೆ$_1$ (< ಕೊಱೆ$_1$) + ನೋಟ]

**ಕೊರೆಪ್ರಾಣ** (ನಾ). ಕುಗ್ಗುತ್ತಿರುವ ಜೀವ; ಹೋಗುತ್ತಿರುವ ಪ್ರಾಣ: (ಕ). [ಕೊರೆ$_3$ (< ಕೊಱೆ$_4$) + ಪ್ರಾಣ]

**ಕೊರೆಬೀಳು** (ಕ್ರಿ). ಕೊರತೆಬೀಳು; ಕಡಮೆಯಾಗು: ರಾಮಾಯಣ ಮಹಾಭಾರತಗಳು ಕೊರೆಬೀಳದ ಗಣಿಗಳ ಹಾಗೆ (ಅಹಲ್ಯೆ. ೩ ಪ್ರಸ್ತಾವನೆ).
[ಕೊರೆ$_3$ (< ಕೊಱೆ$_4$) + ಬೀಳು$_1$ (< ಬೀೞ್$_1$)]

**ಕೊರೆಮೂಗಿ** (ನಾ). ಕೊರೆಯಾದ ಮೂಗುಳ್ಳವಳು: ಅಣ್ಣ ನಿನ್ನಾ ಹೆಂಡ್ತಿ ಅರೆಮೂಗಿ ಕೊರೆಮೂಗಿ (ಹಳ್ಳಿಯ. ೧೦೫).
[ಕೊರೆ$_3$ (< ಕೊಱೆ$_4$) + ಮೂಗು + –ಇ$_2$]

**ಕೊರೆಯ** (ನಾ). ಕೊರತೆಯುಳ್ಳವನು: ಅಳವಿನುಂ ತಿಳಿವಿನುಂ ಕೊರೆಯನಾಂ ನಲ್ಲೆಯಂ ಕಾಣದಳವಳಿದನೆನೆ ಕೇಳ್ವುದೇನಂ (ಸೌನಂದ. ೭–೪೭). [ಕೊರೆ$_3$ (< ಕೊಱೆ$_4$) + –ಅ$_7$]

**ಕೊರೆಯಕ್ಕಿ** (ನಾ). ಅಳೆಯುವಾಗ ಕೊರತೆ ಬಿದ್ದ ಅಕ್ಕಿ; ಅಳತೆಗೆ ಕಡಿಮೆಯಾದ ಅಕ್ಕಿ: (ಕ). [ಕೊರೆ$_3$ (< ಕೊಱೆ$_4$) + ಅಕ್ಕಿ$_1$]

**ಕೊರೆಯಿಸು** 'ಕೊಱೆಯಿಸು' ನೋ.

**ಕೊರೆಯುಳಿ** (ನಾ). ಕೊರೆಯುವ ಕೆಲಸಕ್ಕಾಗಿ ಬಳಸುವ ಸೂಕ್ಷ್ಮವಾದ ಉಳಿ: "ಕೆತ್ತನೆಗಾರನ ಕೊರೆಯುವ ಉಳಿ; ಕೊರೆಯುಳಿ" (Scooper. ಇಂಕನಿ). [ಕೊರೆ$_1$ (< ಕೊಱೆ$_1$) + ಉಳಿ$_5$]

**ಕೊರೆಸಂಬಳ** (ನಾ). ಸಂಬಳದಲ್ಲಿ ಕೊಡದೆ ಉಳಿದುದು; ಸಂಬಳದಲ್ಲಿ ಬಾಕಿ: (ಕ). [ಕೊರೆ$_3$ (< ಕೊಱೆ$_4$) + ಸಂಬಳ]

**ಕೊರೆಸು** 'ಕೊಱೆಯಿಸು' ನೋ.

**ಕೊರೆಸೂಜಿ** (ನಾ). ಕೆತ್ತನೆಯ ಕೆಲಸಕ್ಕಾಗಿ ಬಳಸುವ ಮೊನೆಯಾದ ಸೂಜಿ: "ಕೊರೆಸೂಜಿ, ಕೆತ್ತುವುಳಿ" (Etching–needle ಇಂಕನಿ).
[ಕೊರೆ$_1$ (< ಕೊಱೆ$_1$) + ಸೂಜಿ]

**ಕೊರ್ಕು** 'ಕೊಕ್ಕು$_3$' ನೋ.

**ಕೊರ್ಚು$_1$, ಕೊಚ್ಚು$_3$** (ಕ್ರಿ). ಕತ್ತರಿಸಿ ಹಾಕು; ತರಿದುಬಿಡು; ತುಂಡುಮಾಡು: ಖಂಡಿಸಿ ಕೊರ್ಚಿಇಡಿಱುದಟ್ಟಿ ಮುಟ್ಟಿ (ದಿವ್ಯಸೂ. ೯–೩೨); ಮೃದುಳಪದ ಕಾನನದ ವಿನ್ಯಾಸದ ವಿರಳದ ಕಾಷ್ಠಕೊ[ಪಾಠಾಂ. ಕಷ್ಟಕೋ]ರ್ಚುವದೆಂತು ಸುಕುಮಾರಿ ನಡೆವಳೆಂತು (ವೆಂಕಾರಾ.೨–೧೨–೩). ಕೊಚ್ಚು$_3$: ಹೆಚ್ಚಿದ ಹರುಷವ ಕೊಚ್ಚಿದೆಮುಗನೆ (ಹಚಕಾ. ೧೨–೩೭ ರಗಳೆ); ದಾನವಕುಳವೆಲ್ಲವ ಕೊಚ್ಚಿ (ಅಂಜಚ.೧೪–೧೦); ಕಿಚ್ಚುಗಿಡಿಗೆದಱುವ ಶಿಲೀಮುಖ ಕೊಚ್ಚಲಿಭದವಯವವನು (ಕುಮ್ಯಾದ್ರೋ. ೧೨–೨೧); ಕಚ್ಚ ಬಂದ ಕಾಳಿಂಗನ ಕೊಚ್ಚಲು ಮಡುವ ಧುಮುಕಿದನಂತೆ (ಪುರಂದ. ೨–೯೯–೩). [ಕೊರೆ$_1$ (< ಕೊಱೆ$_1$) + –ಚು]

**ಕೊರ್ಚು$_2$** 'ಕೊಚ್ಚು$_1$' ನೋ.

**ಕೊರ್ಚು$_3$** 'ಕೊಚ್ಚು$_4$' ನೋ.

**ಕೊರ್ಚು$_4$** 'ಕೊಚ್ಚು$_7$' ನೋ.

**ಕೊರ್ಜು** (ನಾ). ಒಂದು ಬಗೆಯ ಸಸ್ಯ: ಕೊಡಚಗ . . . ಕೊರ್ಜು, ಕಹಿಕೊಡ್ಸೀಗೆ ಗಿಡ (ವೈಔಗಿ. ೪೪–೬೭೭). [?]

**ಕೊರ್ಪು** (ನಾ). ಶಸ್ತ್ರವಿದ್ಯೆಯ ವರಿಸೆಗಳಲ್ಲಿ ಒಂದು (?): ಗಮಕಂ ಕೊಂಕಾಂಕೆ ಝುಂಕಾಳ ತೆವಳಿ ಉಳಿಲಾಗಾರ್ಪು ಕೊರ್ಪಾಂತ ಬಿಂಕಂ . . . ಎಂದೆನಿಪನಿತಱ ವೈಚಿತ್ರ್ಯದಿಂ ತಾನೆ ಶಸ್ತ್ರಾಗಮ ಶಿಕ್ಷಾಚಾರ್ಯನೆಂಬೊಂದೆಸಕದಿನೆಸೆದಂ (ಕುಸುಮಾ. ೭–೬೪). [?]

**ಕೊರ್ಬಿಸು** 'ಕೊರ್ವಿಸು' ನೋ.

**ಕೊರ್ಬು$_1$** 'ಕೊರ್ವು$_1$' ನೋ.

**ಕೊರ್ಬು$_2$** 'ಕೊರ್ವು$_2$' ನೋ.

**ಕೊರ್ಬುಗಳೆ** (ಕ್ರಿ). ಕೊಬ್ಬನ್ನು ಕಳೆ; ಸೊಕ್ಕುಮುರಿ: ನಿಬ್ಬರದೆ ಬರ್ಪ ಹಯಬಲದಬ್ಬರಣೆಗೆ ಕೊರ್ಬುಗಳೆದುದಿರ್ಕೆಱಗೆ (ಚಕವಿ. ೨–೯೭).
[ಕೊರ್ಬು$_2$ (< ಕೊರ್ವು$_2$) + ಕಳೆ$_1$]

**ಕೊರ್ಬುಗುಡು** (ಕ್ರಿ). ಕೊಬ್ಬಿಸು ; ಸೊಕ್ಕಿಸು : ತಮಮಂ ಸೆಱಗೆಯ್ದು ಹಿಮಕ್ಕೆ ಕೊರ್ಬು[ಪಾಠಾಂ. ಕೊಂಬು]ಗೊಟ್ಟಾಲವಮಂ (ಪಂರಾಮಾ ೭-೧೨೭). [ಕೊರ್ಬು$_3$(<ಕೊರ್ವು$_2$)+ಕುಡು$_1$(<ಕೊಡು$_1$)]

**ಕೊರ್ಬುವಡೆ** 'ಕೊರ್ವುವಡೆ' ನೋ.

**ಕೊರ್ಮಾತಿ** 'ಕೊಱವತಿ' ನೋ.

**ಕೊರ್ಲೆ** 'ಕೊಱಲೆ' ನೋ.

**ಕೊರ್ವಿಸು, ಕೊಬ್ಬಿಸು, ಕೊರ್ಬಿಸು** (ಕ್ರಿ). ೧. ಹೆಚ್ಚಿಸು ; ವೃದ್ಧಿಪಡಿಸು ; ಬಲಿಸು : ಶ್ರೀಯಂ ಕೂರಿಸಲಾಜ್ಞೆಯಂ ಪಸರಿಸಲ್ ಸತ್ಕೀರ್ತಿಯಂ ಕೊರ್ವಿಸಲ್ (ಲೀಲಾವ.೩-೮೬) ; ಅನೇಕೋಳ್ಕಾಂಶುಗಳ್ ಶಸ್ತ್ರದೀಪ್ತಿಗಳಂ ಕೊರ್ವಿಸೆ (ವರ್ಧಪು. ೮-೪೧); ನಸುನಗೆಯ ಬಾಯ್ಗುಮರ್ದ ಸೊಂಪು ಸೊಂಪಂ ಕೊರ್ವಿಸಲ್ (ಚೆಬಪು. ೧೧-೪೧). ೨. ಹೆಚ್ಚಾಗು ; ಬಲಿ ; ಅಧಿಕವಾಗು : ಬಳಿಕವಳ ಕಾಮಾಗ್ನಿ ಕೊರ್ವಿಸೆ (ಸಾಳ್ವಭಾ. ೧೭-೧೯). **ಕೊಬ್ಬಿಸು** : ೧. ಅವರ ಮನೆಯ ಹೋರಿಯನ್ನು ಚೆನ್ನಾಗಿ ಕೊಬ್ಬಿಸಿ ಬೆಳೆಸಿದ್ದಾರೆ (ರೂಢಿ). **ಕೊರ್ಬಿಸು** : ೧. ಮರಾಳಂಗಳಂ ಪದ್ಮಷಂಡಂ ನಳಿನೀ ಕಾಂಡಂಗಳಿಂ ಕೊರ್ಬಿಸೆ (ಮಲ್ಲಿಪು. ೨-೩೪).

[ಕೊರ್ವು$_1$ + -ಇಸು$_3$]

**ಕೊರ್ವು$_1$, ಕುರ್ವು, ಕೊಬ್ಬು$_1$, ಕೊರ್ಬು$_1$** (ಕ್ರಿ). ೧. ಹೆಚ್ಚಾಗು ; ಅಧಿಕವಾಗು : ದ್ರುಪದನಂ ತಱಿದೊಟ್ಟದೆ ಕೆಮ್ಮಗಾನಿದಂ ಕಡೆಗಣಿಸಿ ದೊರ್ಡೆನ್ನ ಕಡುಗೊರ್ವಿದ ತೋಳ್ಗಳ ಕೊರ್ವದೇವುದೋ (ಪಂಪಭಾ. ೩-೭೭) ; ಪರ್ವಿ ಕೊರ್ವಿ ಸುರ್ವುಗೊಂಡ ಮಾಧವಿಯ ಪೊದಱೊಳ್ (ಪಂಚತಂ. ೨೩೧-೬) ; ದರಹಾಸಜ್ಯೋತ್ಸ್ನೆಯಿಂ ದರ್ಪಕ ವಿಶದಯಶಂ ಕೊರ್ವೆ (ಜಗವಿ. ೧೦-೧೭). ೨. ದಪ್ಪನಾಗು ; ತೋರವಾಗು ; ಬಲಿ : ಬಳೆವ ಮೊಲೆಯಂತೆ ಕೊರ್ವಿ (ಧರ್ಮಾಮೃ. ೨-೧೦೫) ; ನಿನ್ನ ಕೊರ್ವಿದ ಕುಚಂಗಳ್ಗೆ ಪೊಣರ್ವಕ್ಕಿ ಗವಸಣಿಗೆ (ನಂಬಿರ. ೧೪-೧೫) ; ಉರ್ವಿದ ಮುಯ್ವು ಕೊರ್ವಿದ ಪೆಗಲ್ (ಪುಷ್ಪಪು. ೩-೧೫) ; ನಾಡೆ ಕೊರ್ವಿ ತಿಂತಿಣಿವಣ್ಗಳಾಂತ ಕದಳಂ (ಚೆಬಪು. ೧೧-೨೨). ೩. ಉಬ್ಬು ; ಉತ್ಸಾಹಿಸು : ಕುಣಿವುತಂ ಕುಕಿಲಿಱುವುತಂ ಪರ್ವಿ ಕೊರ್ವುತಂ (ಬಸರ. ೧-೩೭); ಘನಹರ್ಷದಿಂದುರ್ವಿ ಕೊರ್ವಿ ಗುರುಚರಣದೊಳ್ಪೀಳ್ದು (ಪದ್ಮರಾ. ೧೨-೫೧). ೪. ಸೊಕ್ಕು ; ಅಹಂಕಾರಪಡು ; ಮದವೇರು : ಅಂತಳವಿಗೞಿಯೆ ಕೊರ್ವಿದ ಕೀಚಕವನಮೆಲ್ಲಮೊಂದಿರುಳೊಳ್ ಸಾಹಸಭೀಮನುದ್ದಾಮ ಕೋಪದವದಹನ ಜ್ವಾಲಾಸಹಸ್ರಂಗಳಿನಱ್ಕಿ ಮೆಱ್ಕಿದಂ ತಪ್ಪುದು (ಪಂಪಭಾ. ೮-೮೦ ವ) ; ನೀನಱಿಯದೆ ಕೊರ್ವಿ ಚಪಳತನದಿಂದೆನ್ನಂ ಮಾನಿಸಿಯೆಗೆತ್ತು ನುಡಿದೈ (ಧರ್ಮಾಮೃ. ೩-೧೧೨) ; ಆವಯವ ಮಂತ್ರವನೆ ನೆರ್ಮಿ ಕೊರ್ವದಿರು ವೈಭಾಷಿಕಾ (ಪದ್ಮರಾ. ೧೧-೧೯೭) ; ಹುಟ್ಟು ದರಿದ್ರಗೆ ಬಹಳ ಸಂಪದವರೆ ನೆಟ್ಟನೆ ಕೊರ್ವು ವಂದದಲಿ (ಮೋಹತ. ೧೭-೫). **ಕುರ್ವು** : ೧. ಉರ್ವಿದನೆ ಕುರ್ವಿದನೆ ಜಗದೊಳು ಜರ್ವಿದನೆ (ಸಾನಂಚ. ೮-೮೮). **ಕೊಬ್ಬು$_1$** : ೧. ರಿಪುಸರ್ವದಳ . . . ಕಲ್ಪಮೇಘದ ಸರಿವಳೆಗೆ ಸಿಗುರೆದ್ದು ಕೊಬ್ಬಿದ ಕದಳಿನಂದದಲಿ (ಕುವ್ಯಾಕ. ೧೨-೬). ೨. ನಸಿದು ಬೆಳೆಯದೆ ಕೊಬ್ಬಿದೊಡ್ಡಿತಹ ತೆನೆಗಳೊಳು (ಸಿದ್ಧರಾ. ೨-೨೯) ; ಗರುಡನೆತ್ತಲು ಕೊಬ್ಬಿದೊಳ್ಳೆಯಮಱಿಯದೆತ್ತಲು (ಕುವ್ಯಾಕ. ೯-೭) ; ಕೊಬ್ಬಿದ ಭುಜಯುಗಳದಿ ವೀರರಸದಿಂದುಬ್ಬಿದ ನಿಡುದೋಳ್ಗಳೆಡೆಯ (ಮೋಹತ. ೩೩-೫೭) ; ಕೊಬ್ಬಿದ ಪೊಱವಾಱು ಪಿಡಿನಡು ಕೊಂಕಿದ ಹುಬ್ಬಿನ ಪೆಣ್ಣೊಂದು (ಭರಚ. ೨-೪೮). ೩. ಕೂಡಲಸಂಗನ ಶರಣರು ಬಂದರೆ ಉಬ್ಬಿ ಕೊಬ್ಬಿ ಹರುಷದಲೋಲಾಡುವೆ (ಬಸವ. ೩೭೭) ; ಕಲಿತನದ ಮಸಕದಿಂದುಬ್ಬುವರ್ ಕೊಬ್ಬುವರ್ (ಚೆಬಪು. ೩೯-೨೪). ೪. ಎಲವೊ ಅಥವಾ ಕೊಬ್ಬಿದೆಯಲಾ (ಬಸಪು. ೨೨-೫೪) ; ಕೊಬ್ಬಿನರಿ ಹೆಬ್ಬುಲಿಯ ಕೂಸನು ಬೇಡುವಂದದಿ (ಕುವ್ಯಾದ್ರೋ. ೫-೪೨); ಮಾಹಿಷ್ಮತೀಪುರದೊಡೆಯ ತಾನುಸದಿ ಕೊಬ್ಬಿರಲು . . . ಅವರ ಸಾಸಿರ ತೋಳ್ಗಳಡವಿಯ ಕಡಿದಾತನೀತ (ಮೋಹತ. ೩೭-೨೭). **ಕೊರ್ಬು$_1$** : ೧. "ಕೊರ್ಬು – ಸಮೃದ್ಧೌ" (ಶಮಧಾ) ; "ಕೊರ್ಬಿದುದೆಂದು ಪೆರ್ಚುಗೆಯ ನಾಮದೊಳಂ" (ಕರ್ಣಾನಿ. ೨೦) ; ಎಡೆವೊತ್ತಿ ಪೊಕ್ಕು ಕೆಲನಂಕೊರ್ಬುತ್ತೆಸೆದು ಬಿದಿರ್ದಾರ್ದುರ್ (ಕವಿರಾ.೧-೬೬). ೨. ಅನವರತಂ ಮೃಗಮಾಂಸಾಶನದಿಂದಮೆ ಕೊರ್ಬಿದ . . . ಈ ತನುವೆಂದಡಿಗಡಿಗೆ ಪೇಸುತಿರ್ದುದು ಮನದೊಳ್ (ವರ್ಧಪು. ೧೨-೩೦). ೩. ಕೊರ್ಬಿಯಾಡುವ ಡುಂಡುಭಂಗಳಂ ಕಂಡು (ಪಂಚತಂ. ೧೨೩-೨೧) ; ತಾಂ ಸಾಷ್ಟಾಂಗದಿಂ ತುಳಿಲ್ಗೆಯ್ದುರ್ಬುತಂ ಕೊರ್ಬುತಂ (ಪದ್ಮರಾ. ೫-೫೩). ೪. "ಜಂಭತಿ – ಕೊರ್ಬಿದಪಂ" (ಕಾಶಕ್ಯ. ೭೭) ; ಮದ್ಯಮಂ ಸಲೆ ಕುಡಿದು ಕೊರ್ಬನೆಯುವಂ (ಪದ್ಮರಾ. ೧೧-೬೪).

[ದೇ.|| ತಮಿ. ಕೊಱುಪ್ಪು ; ತುಳು. ಕೊಬ್ಬು ; ತೆಲು. ಕ್ರೊವ್ವು, ಕೊವ್ವು]

**ಕೊರ್ವು$_2$, ಕೊಬ್ಬು$_2$, ಕೊರ್ಬು$_2$, ಗೊಬ್ಬು$_2$** (ನಾ). ೧. ಹೆಚ್ಚಳ, ಆಧಿಕ್ಯ ; ಸಮೃದ್ಧಿ : ಪುರ್ವಿನ ಕೊರ್ವು ಕರ್ವುವಿಲ್ಲಂ ಕೀಳ್ಮಾಡೆ (ಗಿರಿಕ. ೨-೧೦೫ ವ) ; ಪೂರ್ವಕರ್ಮಾರ್ಜಿತ ಭವಂಗಳ ಕೊರ್ವನಡಗಿಪ ಮಗನೆ ಬಾರಾ (ಬಸಪು. ೨೪-೩೭) ; ಮೊಳೆಯಿಡುವಗೆಯ ನೆಡುವ ನೀರೂಡುವ ಕಳೆಗೀಳ್ವ ಕೊಬ್ಬನಗ್ಗಿಸುವ ಬೆಳೆಗಾಯ್ವ . . . ಪಾಮರೀಜನ (ಶ್ರೀಪಾಲ. ೧-೪೮) ; ತೋಳ್ವಲದ ಕೊರ್ವಿನುರ್ವಿಂದೆಯುಂ (ಮರಾಚ. ೨೮-೧). ೨. ಸೊಕ್ಕು ; ಅಹಂಕಾರ ; ಮದ : ಬಲ್ಲಾಳಪ್ಪನ ಕೊರ್ವುಂ ಜಡಿದಾಳಾಪಂಗೆಯ್ದು ಕೆಡಿಸಿದಂ ನೃಪಸುತನೀ (ಧರ್ಮಾಮೃ. ೨-೮೮); ತಾರಕ ದನುಜನ ಕೊರ್ವು ಪರ್ವಿತುರ್ವೀತಳಮಂ (ಗಿರಿಕ. ೬-೨) ; ವಾದಮುಖದಿಂ ಸೋಲ್ತವಂ ಕೊರ್ವನುೞಿದಾತ್ಮಮತದಾಚರಣಮಂ ಬಿಸುಟ್ಟು (ಪದ್ಮರಾ. ೯-೩). **ಕೊಬ್ಬು$_2$** : ೧. ಕೊಬ್ಬಿನಾಳೆಚ್ಚಾಡಿ ತಿಕ್ಕಿದ ಮಂಡಿ ಚಂಡಿಸದೆ (ಕುವ್ಯಾಭೀ. ೪-೧೨) ; ತಂಬೆಲರ ಕೊಬ್ಬು ಬನಬನದ ಸೌಭಾಗ್ಯಂ (ಚೆಬಪು. ೪೫-೧೬). ೨. ಜ್ಞಾನದ ಉಬ್ಬು ಕೊಬ್ಬಿನಲ್ಲಿ ಉಲಿವುತ್ತಿಪ್ಪವರೆಲ್ಲರು (ಅವಚಂ. ೧೦೬-೪೮೨); ಆಳಿಬಲವನಂಜಿಸಿದ ಕೊಬ್ಬುಗಳಕಟ ನಮ್ಮೊಡನೆ (ಕುವ್ಯಾದ್ರೋ.೧೩-೧೦); ಕೂಳು ಕೊಬ್ಬಿಲಿ ಉರಿವವಳ ಗಂಡ ಹೇಳಿದ ಮಾತ ಕೇಳದೆ ಮೀಱುವವಳ (ಪುರಂದ. ೧-೧೪-೨) ; ಗಬ್ಬಿತನದೆ ಘನಗರ್ವದಿ ಮಲೆವರಾ ಕೊಬ್ಬ ಮುರಿದು (ಸೌಂದಕಾ. ೧-೬೧). ೩. ನೆಣ ; ಮೇದಸ್ಸು ; ಚರ್ಬಿ : ಅಂತು ಕೊಬ್ಬೆಂಬ ಕಿಟ್ಟ ಮುದುರೆ ಪಸುರ್ವಣ್ಣವೆಂಬ ಕಾಳಿಕೆ ಕೞಲೆ ವಿರಹಾಗ್ನಿಯಿಂ ಕಾಯ್ಸಿ (ಲೀಲಾವ. ೧೦-೩೭ ವ) ; ತುಂಡ ಮುಂಡಗಳು ಮಿದುಳು ರೋಹಿತ ಕೊಬ್ಬು ಖಂಡವ ಮನದಣಿ ವನಕ ಉಂಡು (ಮೋಹತ. ೪೦-೭೧). **ಕೊರ್ಬು$_2$** : ೧. ಆಣಂ ಮುಟ್ಟಿದುರಿವ ಮದನಾಗ್ನಿಯ ಕೊರ್ಬು (ಆದಿಪು. ೯-೫೬) ; ಇದು ಶರಣರ ಘನತ್ವಂ ದೇವಯಿಡು ಭಕ್ತರ ಮಹತ್ವಂ ದೇವಯಿಡು ನಿಮ್ಮವರ ನಿತ್ಯತ್ವದ ಸಿರಿಯ ಕೊರ್ಬು (ಸಾನಂಚ. ೮-೨). ೨. "ಕಡಃ – ಕೊರ್ಬು" (ಕಾಶಕ್ಯ. ೨೩). **ಗೊಬ್ಬು$_2$** : ೨. ಎದ್ದು ಹೊಡಿಯುದಕ ಗೊಬ್ಬು ನಿನ್ನಲ್ಯ್ಕಂಟು (ಲೋಕಗೀ. ೧೩೫). [< ಕೊರ್ವು$_1$]

**ಕೊರ್ವುವಡೆ, ಕೊರ್ಬುವಡೆ** (ಕ್ರಿ). ಹೆಚ್ಚಾಗು ; ಕೊಬ್ಬು ; ಬಲಿ : ವಿದೇಹಿಗದೇಂ ಪೃಥು ಕುಚಯುಗದೊಡನೆ ಕೊರ್ವು [ಪಾಠಾಂ. ತೋರ್ಪು]ವಡೆದುದೊ ಮಧ್ಯಂ (ಪಂರಾಮಾ. ೪-೨). **ಕೊರ್ಬುವಡೆ** : ಸೂಕ್ತಿಸುಧಾಪ್ರವಾಹದೊಳ್ ಕೊರ್ಬುವಡೆದು (ಕುಸುಮಾ. ೧೫-೮೯).

[ಕೊರ್ವು$_2$ + ಪಡೆ$_1$]

**ಕೊಲ್$_1$, ಕುಲ್ಲು$_1$, ಕೊಲು, ಕೊಲ್ಲು** (ಕ್ರಿ). ಕೊಂದ (ಭೂತಕೃ). ೧. ಸಾಯಿಸು ; ಪ್ರಾಣ ತೆಗೆ; ವಧೆಮಾಡು : ಈ ಧರ್ಮಕ್ಕೆ ಬಕ್ರ ಬಪ್ಪೊಂ ಬಾರಣಾಸಿಯುಳ್ ಸಾಸಿರ್ವ್ವ ಪಾರ್ವ್ವರುಂ ಸಾಸಿರಂ ಕಪಿಲೆಯುಂ ಕೊನ್ದ ಪಾತಕನಕ್ಕೆ (ಮೈಆರಿ. ೧೯೩೬, ೫೩-೫೫ ; 550) ; ಕೊಲ್ಲದುದೆ ಧರ್ಮಮೆಂದಿಂತು ನಂಬಿ (ಪದ್ಮರಾ. ೧೧-೨೬) ; ಕೊಲ್ಲೆಂ ಬಿಸುಡಾಯುಧಮುಂ ಪುಲ್ಲಂ ಕರ್ಚು (ಕವಿರಾ.೩-೨೦೦); ಗರ ಮುಟ್ಟಿ ಕೊಲ್ವುಮಿದು ನಿಜ ವಿರೋಧಿಯಂ (ಪಂಪಭಾ. ೧-೧೦೩) ; ಕೊಲಲ್ಬರ್ಪಂಗಿದಿರ್ವೋದರೆಂಬಂತೆ (ಧರ್ಮಾಮೃ. ೨-೧೪೯). ೨. ಪೀಡಿಸು ; ನೋಯಿಸು ; ಹಿಂಸೆಮಾಡು : "ಕೊಲ್ – ಹಿಂಸಾಯಾಂ" (ಶಮುಧಾ) ; ಎಲೆ ಚಂದ್ರಹತಕ ಮದನನ ಬಲದಿಂದಂ ಮೇಲೆವರಿದು ಕೊಂದಿಂತೆನ್ನಂ ನಿಲಲಱಿಯೆ (ಕಾದಂಬ. ೬೧೨) ; ಆಯಂಗಿಡೆ ಕಾಮಂ ಕೈಗಾಯದೆ ನಿಂದಾರ್ದು ಮುತ್ತಿ ಕೊಂದಪನ್ (ಧರ್ಮಾಮೃ. ೩-೧೭೮). **ಕುಲ್ಲು$_1$** : ೧. ಆತ್ಮಜರುಗಳ ಬೇಗೆಯಲಿ ಕುಲ್ಲುತಲಿ ತಾಮುನ್ನ ಬದುಕಿದುದೆಲ್ಲವನು ನೆನೆಯುತ್ತ (ಪ್ರಹ್ಲಾಚ. ೮-೫೪) ; ನಾಚಿಕೆಯನ್ನೂ ಹೊಟ್ಟೆಯುರಿಯನ್ನು ಅನುಭವಿಸಿ ಕುಲ್ಲುವುದು (ಸಾಹಿಜೀ. ೮೩). **ಕೊಲು** : ೧. ಕೊಲುವಂ ಗೆಲುವಂ ಕಲಿ ನರಸಿಂಹಂ (ಮೈಆರಿ. ೧೯೩೦, ೧-೨೮ ; 1173 ?); ಕಳಬೇಡ, ಕೊಲಬೇಡ (ಬಸವ. ೨೩೫) ; ಶಿಶುವನಿಱಿವರೆ ಪಶುವಂ ಕೊಲುವರೆ (ಬಸರ. ೪-೩೬) ; ಕೊಲುವವೈ ಕಾಗೆಗಳಕಟ ಕೋಗಿಲೆಯ ಮಱಿಯನು (ಕುವ್ಯಾಸ. ೧೪-೧೨೨) ; ನಿದ್ರಾಭರದೊಳಿರ್ದರ ಕೊಲುವುದುಚಿತವೆ (ನಳಚ. ೨-೨೦). ೨. ಕೊಲುವಾ ಕೂಟವು ನಷ್ಟಮುಪ್ಪ ಕೆಲಸಂ . . . ಫಲದ ಭ್ರಾಂತಿಯು ತೋರ್ಪುದೈ (ಸೋಮೇಶ. ೨೩). ೩. ಹಾಳುಮಾಡು ; ವ್ಯರ್ಥವಾಗಿ ಕಳೆ : ಎಲೆ ಯುಧಿಷ್ಠಿರ ಬಿಲ್ಲ ಹಿಡಿ ನರಹುಳುಗಳಿವದಿರ ಕವಿಸಿ ಕಾಲವ ಕೊಲುವುದೇ ಸಾಕಿನ್ನು ಕೈವಶವಾದೆ ನಿಲ್ಲೆನುತ (ಕುವ್ಯಾದ್ರೋ. ೨-೪೩). **ಕೊಲ್ಲು** : ೧. ಕಲ್ಲ ನಾಗರ ಕಂಡರೆ ಹಾಲನೆಱೆಯೆಂಬರು, ದಿಟದ ನಾಗರ ಕಂಡರೆ ಕೊಲ್ಲೆಂಬರಯ್ಯ (ಬಸವ. ೧೯೪) ; ಚನ್ನಮಲ್ಲಿಕಾರ್ಜುನಯ್ಯ ಕೊಲ್ಲು ಕಾಯಿ ನಿಮ್ಮ ಧರ್ಮ (ಮಹಾದೇ. ೨೨) ; ಎನ್ನುವಂ ಪತಿ ಕೊಂದೊಡಂ ಕೊಲ್ಲಲಿ (ಬಸಪು. ೧೩-೨೫) ; ಆಹವದೊಳು ನಿನ್ನ ಕೊಲ್ಲುವ ಕ್ರೂರಿ ಬಂದಪನು (ಮೋಹತ. ೨೧-೬೮). ೪. ಹೊಡೆ ; ಪೆಟ್ಟುಕೊಡು : ಕಾಲು ತಂದು ಕೇಲಿನೊಳಗೆ ಅದ್ದಿ ಪೋದನಮ್ಮ ಕೋಲ ತಂದು ಕೊಲ್ಲ ಹೋದರೆ ಅಮ್ಮ ಲೀಲೆಯಿಂದ ಓಡಿಪೋದನಮ್ಮ (ಪುರಂದ. ೫-೫೦-೧) ; ವಿಶ್ವಾಮಿತ್ರಗಂ ನಾರಿಯರು ಮೊರೆಯಿಡಲ್ ಮಕ್ಕಳಂ ಕೊಂದುದಕೆ ಕ್ರೂರಮುನಿ ಕೋಪಮಂ ತಾಳ್ದು (ತುರಂಗ. ೩೨-೨೩).

ಕೊಂದಾಟ = ೧. ಕೊಲ್ಲುವಿಕೆ; ಕೊಲೆ: ಕೊಂದಾಟಮಂ ಧೂಮಮಂ ನಿಪುಣರ್ ಕಂಡರೆ ಪೋಗರ್ಪೈ (ಸೋಮೇಶ. ೬೮). ೨. (ಪಗಡೆ ಮೊದಲಾದ ಆಟಗಳಲ್ಲಿ) ಕಾಯಿಯನ್ನು ಹೊಡೆಯುವುದು, —ಕೊಲ್ಲುವುದು : ಕೊಂದಾಟವುಂಟು ಪಗಡೆಯೊಳು (ಶಾಂತೀಚ. ೬-೯). ಕೊಂದಾಡು = ಬಡಿದಾಡು ; ಹೊಡೆದಾಡು : ಮುಂದಾದ ವರ್ಣವ ಹಿಂದಾದುದೆಂಬಾಗ ಕೊಂದಾಡದಿಹರೆ ಕರ್ಮಿಗಳು (ಭರಚ. ೬೧-೧೫). ಕೊಂದಿಕ್ಕಿಸು = ಕೊಂದುಹಾಕಿಸು ; ಸಾಯಿಸು : ಪೊಹೋ ಕೊಂದಿಕ್ಕಿಪಂ, ಮುಕ್ಕಿಪಂ (ಎಕ. VIII, ಸಾಗರ. ೧೦೯-೩೦ ; 1049). ಕೊಂದಿಕ್ಕು = ಕೊಂದುಹಾಕು ; ಸಾಯಿಸು : ಲಂಪಳರಪ್ಪೆಮ್ಮಂದಿಗರಂ ಬಗೆವಂದದೆ ಕೊಂದಿಕ್ಕುವೆ ಸಕಳವಿಷಯ ವಿಷಮ ವಿಷಂಗಳ್ (ಆದಿಪು. ೪-೭೩); ಮುನಿದಿರ್ಪತ್ತೊಂದು ಸೂೞ್ ಕ್ಷತ್ರಿಯರನಱಸಿ ಕೊಂದಿಕ್ಕಿದಾ ರಾಮನಿಂದಿತ್ತ ನರೇಂದ್ರರ್ ಪೊಕ್ಕರಿಲ್ಲೊರ್ಬರುಂ (ಗದಾಯು. ೧-೨೮); ಪೇಸದೆ ಪಾರ್ವ್ವರಂ ಗೊರವರಂ ಗೋಬೃನ್ದಮುಂ ಪೆಣ್ದಿರಂ ತವೆ ಕೊನ್ದಿಕ್ಕಿದ ಪಾಪಮೆಯ್ದುಗುಂ (ಸೌಇಇ. XI-i, ೮೪-೩೬ ; 1049). ಕೊಂದುಕೂಗು = ಕೊಂದು ತಿನ್ನು; ತಿಂದುತೇಗು: ಇಟ್ಟಳಮಾಯ್ತುರ ಚಲ್ಲಿ ಕೊಂದು ಕೂಗಿತು ಕಟಚಲ್ಲಿ (ಕಾವ್ಯಾವ. ೬೧) ; ನಟ್ಟು ಪರಗುವುದುಂ ಕೊಂದು ಕೂಗುವುದುಂ ತಿಂದುತೇಗುವುದುಂ (ಸುಕುಮಾ. ೧೧-೪೭ ವ) ; ಅಗ್ಗಳ ಮೆನೆ ಕೊಂದುಕೂಗುವನರಾತಿಬಳಂ ತಲೆದೋಱಿ ಬಮ್ಮಿಗಂ (ಸೌಇಇ. XX, ೭೬-೩೩ ; 1118) ; ಮನಸಿಜನ ಮಾಯೆ ವಿಧಿ ವಿಳಸನದ ನೆರಂಬಡೆಯೆ ಕೊಂದು ಕೂಗದೆ ನರರಂ (ಯಶೋಚ. ೨-೬೧).

[ದೇ. ‖ ತಮಿ. ಕೊಲ್ ; ಮಲ. ಕೊಲ್ಲು ; ತೆಲು. ಕೊಲ್ಲು ; ಕೊಡ. ಕೊಲ್ಲ್]

**ಕೊಲ್$_2$** 'ಕೋಲ್$_3$' ನೋ.

**ಕೊಲ್$_3$** (ನಾ). ಕೋಲು ; ಗಣೆ; ಗಳೆ. 'ಕೊಲ್ಲಟಿಗ' ಪರಾ. [< ಕೋಲ್$_1$]

**ಕೊಲ$_1$** (ನಾ). ಒಂದು ಸ್ಥಳದ ಹೆಸರು (?) : ಶ್ರೀಮತ್ ಗಂಗೆಗೊಂಡ ರಾಜೇಂದ್ರ ಚೋಳದೇವರ್ ಪ್ರಿಥಿವೀ ರಾಜ್ಯಂಗೆಯ್ಯುತ್ತಿರೆ ಕೊಲದ ಮುನಿವರಾದಿತ್ಯಕಾಯ್ವರಾದಿತ್ಯ ಚೆಲ್ವರಸರ ಮಗ (ಎಕ. X, ಚಿಂತಾಮ. ೧೫೩-೩ ; 1000). [?]

**ಕೊಲ$_2$** (ನಾ). ೧. ಕುಲ ; ವಂಶ: ಆ ಕೊಲದೊಳೊರ್ವ್ವ ಪದ್ಮನಿ ಲೋಕೋನ್ನತ ಪುಟ್ಟಲಱಿದು (ಕಇ. I, ೨೫-೫೦ ; 1186) ; ತೇಕಲ ಸೀಮೆವೊಳಗಣ ಉಳ್ಳಿಯರ ಹಳ್ಳಿ × ಣ ಕೊಲದ ತಂಬಿಗೆ ಸರ್ವಮಾನ್ಯದ ಭಟವೃತ್ತಿಯಾಗಿ ಕೊಟ್ಟೆಉ(ಎಕ. X, ಮಾಲೂರು. ೩೫-೫; 1525). ೨.ಗುಂಪು; ಸಮೂಹ: ಮೃಗಮಾರಣಮಿಲ್ಲದಲ್ಲಿ ಯೆಲ್ವಿನ ಕೊಲ್ಲ ಮಿಲ್ಲದಲ್ಲಿ . . . ಶಬರಂ ಸುಖಮಿರ್ಪಂ (ಅರ್ಧನೇ. ೩-೭೭). [< ಸಂ. ಕುಲ]

**ಕೊಲಂಬಾಬೇರು** (ನಾ). ಒಂದು ಬಗೆಯ ಮೂಲಿಕೆ: (ವೈಔಗ. ೪೭-೯೪೨). [?]

**ಕೊಲಜ** (ನಾ). ಒಳ್ಳೆಯ ಕುಲದಲ್ಲಿ ಹುಟ್ಟಿದವನು; ವಂಶಜ : ತೈಲನಲ್ಲದೆ ಪೆಜನಾವೊಂ ಪಿಕ್ಕ ನೋೞ್ದೊಡಿರ್ತಲೆಗೊಲ [ಪಾಠಾಂ. ಗೋ]ಜಂ (ಕಾವ್ಯಾವ. ೨೧೧) ; ಒಡಿಪೊಡಿಸಿ ಅರಮನೆ ಪುಗುವರಾ ಅಬ್ಬೆ ಆಳ್ಮನ್ ಕೊಲಜರ ಮುಗಸುಂಗೆಯೊಳ್ತುವನ್ ಸ್ವಾಮಿಘಾತಕರ ಬೆನ್ನಮ್ವೊಱೆವ್ವನ್ (ಸೌಇಇ. IX-i, ೧೬-೨೦ ; ?). [< ಸಂ. ಕುಲಜ]

**ಕೊಲಜೆ** (ನಾ). ಒಳ್ಳೆಯ ಕುಲದಲ್ಲಿ ಹುಟ್ಟಿದವಳು; ಕುಲೀನೆ : (ಶ). [< ಕುಲಜೆ]

**ಕೊಲತ್ತೂರ್** (ನಾ). ಒಂದು ಊರಿನ ಹೆಸರು : ತತೋತ್ತರೇ ಉತ್ತಗ್ರಾಮಸ್ಯ ಕೊಲತ್ತೂರ್ನಾಮ ಗ್ರಾಮಸ್ಯ (ಎಕ. X, ಮುಳಬಾ. ೧೫೭-೩೮ ; 338 ?). 'ಕೊಳತ್ತೂರ್' ಪರಾ. [? + ಊರ್]

**ಕೊಲದುಗದ್ದೆ** (ನಾ). ಒಂದು ಬಗೆಯ ಗದ್ದೆ (?) : ಎರೆಗದ್ದೆ ಸ್ಥಳದಲು ಮಾನ್ಯವಾಗಿ ಕೊಲದುಗದ್ದೆ ಖ ೧ (ಎಕ. XVI, ಚಿಕ್ಕನಾ. ೧೦೩-೧೨ ; 1589). [ಕೊಲದು ? + ಗದ್ದೆ (< ಗೞ್ದೆ)]

**ಕೊಲಾರಿ** 'ಕೊಲ್ಲಾರ' ನೋ.

**ಕೊಲಿಕೆ, ಕೊಳಿಕೆ** (ನಾ). ಕೊಂಡಿ ; ಕುಣಿಕೆ : (ಶ). **ಕೊಳಿಕೆ**: ದ್ವಿತೀಯಾಕ್ಷರ ಪ್ರಾಸವೆಂಬುದು ಕೋಳಿಕೆಯುಳ್ಳ ಸರಿಗೆ (ಸಂಶೋಧ ೧೨೬). [ದೇ. ‖ ತಮಿ. ಕೊಳುಕ್ಕಿ; ತುಳು. ಕೊಲಿಕೆ; ತೆಲು. ಕೊಲಿಕಿ, ಕೊಲ್ಕಿ]

**ಕೊಲಿಗನ್** (ನಾ). (?): ಪಟ್ನಿ ನನ್ದಿ ಕೊಱೆಯ ಮೂಡೈ ಕಡೆಗೋಡತ್ತಿ ಬಲಗೈ ನಡದು ಕಲ್ಮಲರುಳಿ ಕೊಲಿಗನ್ಮೇಲ ಕಾರಱಿಎ ಇಟ್ಟಿಗೆ ಸೂಣಿಎ (ಎಕ. X (s), ಚಿಕ್ಕಬ. ೬೬-೨೦ ; 850). [?]

**ಕೊಲಿಗನ್ನೆಱಿಕ್ಕಾಲು** (ನಾ). ಒಂದು ಕ್ಷೇತ್ರದ ಹೆಸರು: ಕೊಕಂದಿಯುಂ ಮಯಿಲುರಗಯುಂ ಮೇಲ್ವಾಳುಂ ಜಾದಿಗಾಲು ಕೊಲಿಗನ್ನೆಱಿಕ್ಕಾಲು ಬನ್ದು ತೋಟ್ಟಮುಂ ಅಱು ಕಳನಿಉಂ (ವೈಆರಿ. ೧೯೨೫, ೧೦೬-೧೯ ; ?). [?]

**ಕೊಲಿಗೆ** (ನಾ). ಒಂದು ಬಗೆಯ ಭತ್ತ (?): ಮಳಲಿ ಖಂ ೫ ಮೊರಹಳ್ಳಿ ಖಂ ೧೬ . . . ಕೊಲಿಗೆ ಖಂ (ಎಕ. VIII, ತೀರ್ಥಹ. ೧೯-೧೧೦ ; 1573). [?]

**ಕೊಲಿಮೆ, ಕುಲಮೆ, ಕುಲಿಮೆ, ಕುಲುಮೆ, ಕೊಲುಮೆ** (ನಾ). ಅಕ್ಕಸಾಲಿಯ ಅಥವಾ ಕಮ್ಮಾರನ ಒಲೆ: ಮದಗಿನ ಮಣ್ಣ ಮೇಗೆ ಬನ್ದು ಕೊಲಿಮೆಗೆ ಒಕ್ಕಂಣ್ಣುಗ ಮಣ್ಣು (ಸೌಇಇ. IX-i, ೧೮-೧೯; 884). **ಕುಲಮೆ** : (ಕ). **ಕುಲಿಮೆ** : ಗಾದೆ ಅನುಭವದ ಕುಲಿಮೆಯಲ್ಲಿ ಕಾಯ್ದು ಬಂದ ಚಿನ್ನದ ಚೂರು (ರೂಪಸಂ. ೫೯). **ಕುಲುಮೆ** : ನಗುತೆಲ್ಲವಂ ತಂದು ಕುಲುಮೆಯಿಕ್ಕಿ (ಗುರುಚಾ. ೧೩-೭೫) ; ಸರ್ವನಾಶದ ಕುಲುಮೆಯಲ್ಲಿ ಅವಳ ಜ್ಞಾನೇಂದ್ರಿಯಗಳೆಲ್ಲಾ ಸುಟ್ಟುಹೋಗಿ ಬೊಂಬೆ ಮಾತ್ರವಾಗಿದ್ದಳು (ಮಗಮಾಂ. ೧೨೪); ಮತ್ತೆ ಮತ್ತೆ ವಿಚಾರದ ಕುಲುಮೆಗೆ ಹಾಕಿ ಕಾಸಿ ಬಡಿದು (ಕಗದ್ಯ. ೧೫೩). **ಕೊಲುಮೆ** : ಕಬ್ಬಿಣವ ಕೊಲುಮೆಯೊಳು ಇಕ್ಕಿ . . . ಕಾಸಿ (ಜ್ಞಾನಸಿಂ. ೬-೧೨) ; ಶಂಖವನ್ನು ಕೊಲುಮೆಯಲ್ಲಿ ಮೂರು ಮೂರು ಬಾರಿ ಕಾಸಿ (ವಿವೈವಿ. ೫೦).
[ದೇ. ‖ ತುಳು. ಕೊಲಮೆ ; ತೆಲು. ಕೊಲಿಮಿ]

**ಕೊಲಿಸು, ಕೊಲ್ಲಿಸು** (ಕ್ರಿ). ೧. ಕೊಲ್ಲುವಂತೆ ಮಾಡು ; ಸಾಯಿಸು ; ಕೊಲೆಮಾಡಿಸು : ಕಳಿಪಂ ಕಳ್ವನಗುರ್ವು ಪರ್ವೆ ಕೊಲಿಪಂ ಕೊಲ್ವಂ ಎನಿಪ್ಪ ಪಾಪಿಯುಂ (ಆದಿಪು. ೫-೮೧); ಕಳಶಜನನಿಂತು ಕೊಲಿಸಿದ ಖಳನೆಗಡಂ ಧರ್ಮನಂದನಂ (ಗದಾಯು. ೩-೨೬) ; ಈ ಪಾತಕಿಯ ಮಾತಂ ನಂಬಿದೋಷಿಯಲ್ಲದನಂಕೊಲಿಸುವುದುಧರ್ಮವಲ್ಲ(ಪಂಚತಂ.೬೯-೧೩); ಲಲನೆಗೋಸುಗಹೆತ್ತಮಗನನು ಕೊಲಿಸಿದ್ಯೆ ಹಾ ಪಾಪಿ(ಕೌಶಿರಾ.೩೭-೨); ಕೊಂಡೊಯ್ದು ಕೊಲಿಸು [ಪಾಠಾಂ. ಬಡಿಯು]ವರ ಕೊಂಡಾಡುತಿರಬೇಕು (ಪುರಂದ. ೨-೭೫-೩). **ಕೊಲ್ಲಿಸು** : ೧. ಸಂಪತ್ತಿನಾಸೆಗಾಗಿ ತನ್ನ ಅಣ್ಣ ತಮ್ಮಂದಿರನ್ನು ಕೊಲ್ಲಿಸುವುದೂ (ಧರ್ಮಸಾ.೨೩). ೨. ಹೊಡೆಯಿಸು; ಬಡಿಯಿಸು ; ಹಿಂಸಿಸು : ಸ್ತ್ರೀಯರಾಡಿದಕೆ ಕೋಪಮಂ ತಾಳ್ದು ಕೊಲ್ಲಿಸಿ ಕೊಲೆಯ ಕೂಡೆ ಪೊರವಡಿಸಲು (ತುರಂಗ. ೩೨-೨೨).

ಕೊಲಿಸಿಕೊಳ್ = ಕೊಲೆಗೆ ಗುರಿಯಾಗು ; ಸಾವನ್ನು ತಂದುಕೊಳ್ಳು: ಪಶುಗಳ ಮಯ್ಯೊಳೆನಿತು ರೋಮಮುಂಟನಿತು ಬಾರಿ ತಾಂ ಕೊಲಿಸಿಕೊಂಬಂ (ಪಂಚತಂ. ೬೨-೧೬). [ಕೊಲ್₁ + -ಇಸು₃]

**ಕೊಲು** 'ಕೊಲ್₁' ನೋ.

**ಕೊಲುಕುಟಕನಗಿಡ** (ನಾ). ಕೋಳಿಕುಟುಮನ ಬಳ್ಳಿ : (ಕ).
[ಕೊಲುಕುಟಕ + ಗಿಡ₁ (< ಗಿಡು)]

**ಕೊಲುಮೆ** 'ಕೊಲಿಮೆ' ನೋ.

**ಕೊಲೆ₁** (ಕ್ರಿ). ಕೊಲ್ಲು ; ಸಾಯಿಸು ; ವಧೆಮಾಡು : ಖರದೂಷಣರ್ ಮೊದಲಾಗೆ ಕೊಲೆದನ್ ಚತುರ್ದಶ ಸಹಸ್ರರಂ (ಶ್ರೀರಾಮಾ. ೫೫೪-೫೯).
[< ಕೊಲೆ₂]

**ಕೊಲೆ₂** (ನಾ). ೧. ಕೊಲ್ಲುವಿಕೆ; ವಧೆ: ಇದಾನ್ ಅಱಿತ್ತೊನ್ ಬಾರಣಾಸಿ ಏಱು ಕವಿಲೆ ಕೊನ್ದ ಕೊಲೆಯ್ದುವೊನ್ (ಎಕ. XIV, ತಿರುಮ. ೨೩೪-೯ ; 8ನೆಯ ಶತ); ಕೊಲೆಯೊಳ್ ಪೊರೆಯಿಲ್ಲದ ಪರಲಲನೆಗೆ ಬಗೆಗುಡದ (ಶಾಂತಿಪು. ೧-೮೮); ಕವರ್ತೆಯ ಮೇಲೆ ಕೊಲೆಯೆಂಬಂತೆ (ಧರ್ಮಸ್ಮೃ. ೮-೧೬೧) ; ತನ್ನಯ ಕೊಲೆಗೆ ಮಗನಳಿವೊಂದು ಸಾಲದೆ ತನ್ನ ನುಡಿಯೇಕೆ (ಕುವ್ಯಾದ್ರೋ. ೭-೧೯). ೨. ಹಿಂಸೆ; ಪೀಡೆ; ತೊಂದರೆ: ವಾಸುದೇವನ ತಲೆಯ ಮೇಲೆ ಅದೆಂತಹ ಕೊಲೆ ಬಂದು ಕುಳಿತಿತೋ . . . ತಿಳಿಯಲೇ ಇಲ್ಲ (ಮೂರುದಾ. ೧೨೮). [ದೇ. ‖ ತಮಿ. ಕೊಲೈ ; ಮಲ. ಕೊಲ್ಲಿ]

**ಕೊಲೆ₃** (ನಾ). (?) : ತ್ರಿಸನ್ಧಿಯ ಕೊಲೆ ಚಣ್ಡಗಾಲೆ (ಎಕ. I, ೧-೨೫ ; 466). [?]

**ಕೊಲೆಕೋಡು** (ನಾ). ಕೊಲ್ಲುವ ಕೋಡು; ಸಾಯಿಸುವ ಕೊಂಬು: ಅವರನ್ನು ನಿನ್ನಾನೆಯ ಕೈಯ ಕೊಲೆಕೋಡುಗಳಿಱಿತ ಕಾಲ್ಗಳ ಬಡಿತಂಗಳಿಂದ ಲಯವನ್ನೈದಿಸು ಪೋಗೆಂದು (ಕಗವಿ. ೮೯-೧೬ ; ವಿಷ್ಣುಪು).
[ಕೊಲೆ₁ + ಕೋಡು₅]

**ಕೊಲೆಕೋಣೆ** (ನಾ). ಕೊಲ್ಲುವ ಕೋಣೆ : "ಯಾತನೆಯಿಲ್ಲದೆ ಪ್ರಾಣಿಗಳನ್ನು ಕೊಲ್ಲುವ ಕೋಣೆ; ಕೊಲೆಕೋಣೆ" (Lethal Chamber. ಇಂಕನಿ).
[ಕೊಲೆ₁ + ಕೋಣೆ]

**ಕೊಲೆಗ** (ನಾ). ಕೊಲೆ ಮಾಡುವವನು ; ಕೊಲೆಗಡಿಕ : "ಅಂತಕಃ, ಅಂತಮಾನಃ - ಈ ೨ ಕೊಲೆಗಂ" (ಕಾಶಕ್ಯ. ೯೭) ; ಓ ಕೊಲೆಗ ನಾನಿರೆ ನಿರ್ನೆರಂ ನಿಮ್ಮನೇನೆಂದು ಪೞಿವೆನೋ (ರಾಮಾಶ್ವ. ೨೯-೭).
[ಕೊಲೆ₁ + -ಗ₃]

**ಕೊಲೆಗಡಕ** 'ಕೊಲೆಗಡಿಕ' ನೋ.

**ಕೊಲೆಗಡಿಕ, ಕೊಲೆಗಡಕ, ಕೊಲೆಗಡಿಗ, ಕೊಲೆಗಡುಕ** (ನಾ). = ಕೊಲೆಗ : ಕೊಲೆಗಡಿಕನಿದಿರಲಿ ಕೆಚ್ಚುಮನದವರಾರು (ಕುವ್ಯಾದ್ರೋ. ೨-೭೬) ; ಇಳೆಯ ಪಾರ್ಥಿವರದಟು ಕೊಡಲಿಯ ಕೊಲೆಗಡಿಕಗದು ಸೊಗಸೆ (ತೊರರಾ. ೧-೧೭-೩); ವ್ಯಾಜದಲ್ಲಿ ಕೊಲೆಗಡಿಕರುಪಹತಿಗೈವ ಸಮಯದಲಿ (ನಿಭಾಗ. ೧೧-೩-೯). **ಕೊಲೆಗಡಕ** : ಮೂಲ ಕೊಲೆಗಡಕನು ಸಿಗದುದರಿಂದ ಖಿಲ್ಲಿ ನಿರ್ಜೀವವಾಯಿತು (ಜವಾನ್ನಾ. ೧೫೯) ; ಕೊಲೆಗಡಕರನ್ನು ಕರೆಸಿ ಜನಕ ದಶರಥರೀರ್ವರನ್ನು ಕೊಂದು ಬರುವಂತೆ ಆಜ್ಞಾಪಿಸುವನು (ಸಾಹಿಸ. ೮೬). **ಕೊಲೆಗಡಿಗ** : ಕೊಲೆಗಡಿಗ ಕಂದರ್ಪಕನ ಕೂರಲಗೋ (ಕುವ್ಯಾವಿ. ೨-೯); ಕೊಲೆಗಡಿಗನಿದಿರಾದನಾ ಕುಂಭಾನುಜನ ರಣಕೆ (ತೊರರಾ. ೬-೩೯-೨); ಕೊಲೆಗಡಿಗ ಚಂಡಾಲರುಗಿದ ಕೈದುಗಳಿಂದೆ . . . ಇಱಿದು ಕೆಡಹಿದೊಡೆ (ಜೈವಿಭಾ. ೩೧-೪೭). **ಕೊಲೆಗಡುಕ**: ಎಲೆಲೆ ಬೆಂದುದು ಲೋಕ . . . ನಿಲಿಸು ನಿಲಿಸೀ ಮೂರ್ಖಕಮಲಜನ ಕೊಲೆಗಡುಕಸರವನೆಂದಲ್ಲಲ್ಲಿ ಗುಜುಗುಜಿಸೆ (ಚೆಬಪು. ೧೬-೨೮).
'ಕೊಲೆಗಡುಕತನ' ಪರಾ. [ಕೊಲೆ₂ + ಕಡಿಕ₃]

**ಕೊಲೆಗಡಿಗ** 'ಕೊಲೆಗಡಿಕ' ನೋ.

**ಕೊಲೆಗಡುಕ** 'ಕೊಲೆಗಡಿಕ' ನೋ.

**ಕೊಲೆಗಡುಕತನ** (ನಾ). ಕೊಲೆಗಾರನ ಸ್ವಭಾವ, —ವೃತ್ತಿ : ಲಾಲಿಸದೆ ಕುಲಛಲವ ನೀತಿಯ ಪಾಲಿಸದೆ ಕೊಲೆಗಡುಕತನದೊಳು ಮೇಲುಗಾಣದೆ ಬಂಧುಗಳ ಗುರುಗಳ ಸಹೋದರರ ಕೋಲಮೊನೆಯಲಿ ಕೊಂದು (ಕುವ್ಯಾಭೀ. ೩-೪೨). [ಕೊಲೆಗಡುಕ(<ಕೊಲೆಗಡಿಕ) + -ತನ]

**ಕೊಲೆಗಯ್ಯ** (ನಾ). ೧. ಕೊಲ್ಲುವ ಕೈಗಳನ್ನುಳ್ಳವನು. ೨. ಕೊಲ್ಲುವ ಸೊಂಡಿಲುಳ್ಳದ್ದು : ಅಯ್ಯಯ್ಯೊ ನೃಪನಳಿದನಳಿದ ಕೊಲೆಗಯ್ಯನಪ್ಪಾನೆಯೊಳೆಂದು . . . ಬಿಯದಿಯರಲ್ಲಿ ಪುಯ್ಯಲನಿಟ್ಟಳಿದರು (ಶ್ರೀಪಾಲ. ೭-೫೭). [ಕೊಲೆ₁ + ಕಯ್₂ (< ಕೆಯ್₂) + -ಅ₇]

**ಕೊಲೆಗಾರ** 'ಕೊಲೆಗಾಱ' ನೋ.

**ಕೊಲೆಗಾರ್ತಿ** (ನಾ). ಕೊಲೆಮಾಡುವವಳು ; ಕೊಲೆಗಡಿಕೆ: "ಶರ್ವಾಣಿ - ಕೊಲೆಗಾರ್ತಿಯುಂ, ಗೌರಿಯುಂ" (ಕಾಶಕ್ಯ. ೨೪೫).
[ಕೊಲೆಗಾಱ + -ತಿ₁ (< -ಇತ್ತಿ)]

**ಕೊಲೆಗಾಱ, ಕೊಲೆಗಾರ** (ನಾ). = ಕೊಲೆಗ: ಕಾಮನು ಕರುಣಿಯೇ ಕೊಲೆಗಾಱರಿಗೆ (ತೊರರಾ. ೬-೧೨-೪). **ಕೊಲೆಗಾರ**: "ಹಿಂಸಕಃ – ಕೊಲೆಗಾರಂ" (ಕಾಶಕ್ಕ. ೨೩೫); ಒಬ್ಬನ ಕೊಂದವನಾದರೆ ಕೊಲೆಗಾರ (ಇಂಚಾಪ ೨೩೫-೬೧). [ಕೊಲ್$_2$ + -ಕಾಱ]

**ಕೊಲೆಗುತ್ತ** (ನಾ). ಸಾವನ್ನುಂಟುಮಾಡುವ ರೋಗ; ಮಾರಕ ವ್ಯಾಧಿ: ಮುಂಚೆ ಬಂದ ಸಂಚಿನ ಪ್ರಪಂಚದ ಕೊಲೆಗುತ್ತದ ಬೇನೆಗೆ ನರಲ್ವರ್, ಅಱುವಗೆಗಳ್ಗೆ ತಮ್ಮಂ ಮಾಱುಗೊಟ್ಟ ಕೊಟ್ಟಿರ್ (ರಾಮಾಶ್ವ. ೭೮-೮); "ಕೊಲೆಯ ಅಪಾಯ" (ರಾಮಾಶ್ವ. ಕೋಶ). [ಕೊಲ್$_2$ + ಕುತ್ತ]

**ಕೊಲೆಗೆಲಸ** (ನಾ). ಕೊಲ್ಲುವ ಕೆಲಸ; ವಧೆ: ಜನದ ಕೊಲೆಗೆಲಸದ ನಿರೂಪಕೆ ಮನವ ತಂದಳು ಮೃತ್ಯು (ಕುವ್ಯಾಪ್ರೋ. ೭-೩೫); ಮೂಱು ಲೋಕದ ಕೊಲೆಗೆಲಸಕುಬ್ಬೇಱಿದಸಮಾಂಬಕನವೊಲು (ತೊರರಾ. ೪-೬-೧೮); ಸುರಾರಿವಂಶದ ಕೊಲೆಗೆಲಸಕೊಡೆಯನು ನಿರೂಪಿಸೆ (ನಿಭಾಗ. ೯-೫-೧೦); ಧರೆಯೊಳಾರ್ತರನೈದೆ ರಕ್ಷಿಸುವ ಬುದ್ಧಿ ಕೋಮಲೆಯ ಕೊಲೆಗೆಲಸಕಾಯ್ತು (ಜೈವಿಭಾ. ೧೯-೨). [ಕೊಲ್$_2$ + ಕೆಲಸ]

**ಕೊಲೆಗೇಡಿ** (ನಾ). = ಕೊಲೆಗ: ಮೊಲೆವಾಲನುಣಿಸಿದಾಯಕನ ಪ್ರಾಣವ ಕೊಂದ ಕೊಲೆಗೇಡಿ ಬಲುಪ ತೋಱಿನಗೆ (ಮೋಹತ. ೪೦-೨೬). [ಕೊಲ್$_2$ + ಕೇಡಿ]

**ಕೊಲೆಗೈ** (ಕ್ರಿ). ಕೊಲೆಯನ್ನು ಮಾಡು; ವಧಿಸು: ಕೊಲೆಗೈಯೆಂಬುದು ಡೆಂಕಣಿಕುಲದೊಳ್ ಜಲಗಯ್ಕೆಂಬುದು ಜತಿಗಳ ವ್ರತಮಂ ಪಿಡಿವಲ್ಲಿ (ಉದ್ಭದೇ. ೨-೧೩). [ಕೊಲ್$_2$ + ಗೈ (< ಕೆಯ್$_1$)]

**ಕೊಲೆಗೊಳ್, ಕೊಲೆಗೊಳ್ಳು** (ಕ್ರಿ). ೧. ಕೊಲೆಯನ್ನು ಮಾಡು: ಕೊಲೆಗೆ ಕೊಲೆಗೊಂಡಲ್ಲದೋಜೆಗೆ ನಿಲಲಱಿಯದೀ ಮನವು (ತೊರರಾ. ೩-೭-೩೩). **ಕೊಲೆಗೊಳ್ಳು**: ೨. ಕೊಲ್ಲಿಸಿಕೊಳ್ಳು; ಕೊಲೆಯಾಗು. [ಕೊಲ್$_2$ + ಕೊಳ್$_1$]

**ಕೊಲೆಗೊಳ್ಳು** 'ಕೊಲೆಗೊಳ್' ನೋ.

**ಕೊಲೆಪಡು** (ಕ್ರಿ). ಕೊಲೆಮಾಡಲ್ಪಡು; ಕೊಲೆಗೆ ಈಡಾಗು: ಈ ಕೊಲೆಪಡುವಾತನರಸರ ಗೋಮಂಡಳಮಂ ಕಾವೊಂ ವೀರಪೂರ್ಣನೆಂಬೊಂ (ವಡ್ಡಾರಾ. ೨೨-೧). [ಕೊಲ್$_2$ + ಪಡು$_1$]

**ಕೊಲೆಪಾತ** (ನಾ). = ಕೊಲೆಪಾತಕ ೧: ಪ್ರತಿಪಕ್ಷದವರನ್ನು ನಿಂದಿಸುವುದು ಕೊಲೆಪಾತಕ್ಕೆಳಸುವುದು – ಇದು ಎಲ್ಲ ದೇಶಗಳಲ್ಲಿಯೂ ಎಲ್ಲ ಮತಗಳಲ್ಲಿಯೂ ಕಂಡುಬರುವ ಮಾತು (ಸಾಹಿಸ. ೧೪೭). [ಕೊಲ್$_2$ + ಪಾತ]

**ಕೊಲೆಪಾತಕ** (ನಾ). ೧. ಕೊಲೆಯ ಪಾಪ; ಕೊಂದುದರಿಂದಾಗುವ ಪಾಪ: (*). ೨. ಕೊಲೆಗಾರ; ಕೊಲೆಗಡಿಕ: ಇನ್ನು ಗುಂಡು ತಾಕದಲ್ಲಿ ಕೊಲೆಪಾತಕ ಸೋಕದಲ್ಲಿ (ಸೂರ್ಯಪಾ. ೧೧-೫); ಅವರು ಇಡೀ ವಿಶ್ವವನ್ನು ಧ್ವಂಸಮಾಡಿದರೂ ಕೊಲೆಪಾತಕರಲ್ಲ (ಧರ್ಮಸಾ. ೧೩೮). [ಕೊಲ್$_2$ + ಪಾತಕ$_2$]

**ಕೊಲೆಪಾತಕಿ** (ನಾ). ೧. = ಕೊಲೆಪಾತಕ ೨: ತಾನು ಕೊಲೆಪಾತಕಿಯಾದೆನಲ್ಲಾ ಈ ಪಾತಕವನ್ನು ಹೇಗೆ ಕಳೆದುಕೊಳ್ಳಲಿ? (ಕಂಬಹು. ೩೪); ಏನು ಕೊಲೆಪಾತಕಿಗೆ ಹೆದರುವುದಿಲ್ಲವೇ? (ದೇಶಧು. ೪೭). ೨. ಕೊಲೆಗಾತಿ; ಕೊಲೆಗಡಿತಿ: ಅವಳು ಕೊಲೆಪಾತಕಿ (ರೂಢಿ). [ಕೊಲ್$_2$ + ಪಾತಕಿ]

**ಕೊಲೆಬಲೆ** (ನಾ). ಕೊಲ್ಲುವ ತಂತ್ರ, —ಜಾಲ: ರಕ್ಕಸರ ಕೈತವದ ಕೊಲೆಬಲೆಗೆ ಸಿಲ್ಕದೋಲೆಮ್ಮಮಿತ್ರಂ ನಾನೆ ರಕ್ಷಣಾವ್ಯೂಹಮಂ ರಚಿಸಿ ಮೈಗಾವಲಿರ್ಪೆನ್ (ಶ್ರೀರಾಮಾ. ೬೨೪-೧೮೧). [ಕೊಲ್$_2$ + ಬಲೆ$_1$]

**ಕೊಲೆಬೀೞ್** (ಕ್ರಿ). ಕೊಲೆಯಾಗು: ಶ್ರೀಮುತ್ತರ ಅತಿರಥಗಣ್ಣ ಪೊಸವೆಣ್ಣರಮ್ಮಿ ಬೀಸಿ ತಪ್ಪದೊನ್ . . . ಜಯಕೆನಲ್ಲಾ ಕೊಲೆಬೀೞದೊನ್ (ಎಕ. XV, ಅರಸೀ. ೨೧೫-೫; 890). [ಕೊಲ್$_2$ + ಬೀೞ್$_1$]

**ಕೊಲೆಮನೆ** (ನಾ). ಕೊಲ್ಲುವ ಮನೆ; ಕಟುಕರ ಮನೆ; ಕಸಾಯಿಖಾನೆ (?): ಮುಂದೆ ಅಗೆಯಲು ಒಂದು ಕೊಲೆಮನೆ ಕಾಣಿಸಿತು (ಬುದ್ಧಪ. ೭೨). [ಕೊಲ್$_2$ + ಮನೆ]

**ಕೊಲ್ಗತ್ತಿ** (ನಾ). ಒಂದು ಬಗೆಯ ಖಡ್ಗ: ಮೊಳೆಗತ್ತಿ ಕೊಲ್ಗತ್ತಿ ಕೊಂಕಣ ಬಿಡೆಗತ್ತಿ ಸೆಳೆಗತ್ತಿ ಮಾಂಮೊಗತ್ತಿ (ದೇವಾಂಪು. ೩-೨೦೧). [< ಕೊಲ್$_2$ + ಕತ್ತಿ]

**ಕೊಲ್ಚಂದಿಕ್ಕು** (ಕ್ರಿ). ಸರಪಣಿಯಿಂದ ಕಟ್ಟು (?): ದುರದೊಳ್ ಕಾಯ್ದು ಕಡಂಗಿ ಪೊಂಗಿ ಮಲೆದೋರರ್ನಿಱಿದ್ದನೆಯ್ತಂದ ಮಚ್ಚರದಿನ್ನಾನ್ತೊರನನ್ತಕಂಗಿಡದೆ ಕೊಲ್ಚನ್ದಿಕ್ಕಿ ಮಿಕ್ಕೀ ವಸುಂಧರೆಯೊಳ್ ತನ್ನದಟುಂ ಪ್ರತಾಪಮುಮದಾ ರಾಜೋತ್ತಮಂ ಪೆರ್ಚ್ಚೆ (ಎಇ. XVIII, ೧೭೨-೬; 985). [ಕೊಲ್ಚು + ಇಕ್ಕು ?]

**ಕೊಲ್ಚು** (ನಾ). ೧. ಗೊಲಸು (?): ಮತ್ತರು ೪೦ ಜೀರ್ಣೋದ್ಧಾರದ ಬೆಸಕ್ಕೆ ಕೊಲ್ಚನುಣ್ಡು ಮಾಡುವ ಕಲುಕುಟಿಗೆವೋಜುಗಳು ನಾಲ್ವರ್ಗಂ (ಕಇಅ. ೯-೩-೩೧೩; ?). ೨. ಸರಪಣಿ. 'ಕೊಲ್ಚಂದಿಕ್ಕು', 'ಗೊಲಸು' ಪರಾ. [← ತಮಿ. ಕೊಲುಸು, ಕೊಲುಚು]

**ಕೊಲ್ಲ$_1$** (ನಾ). (ಕರಾ) ಕಮ್ಮಾರ: ಈ ಕತ್ತಿಯನ್ನು ನಮ್ಮ ಮನೆಯ ಸಮೀಪದಲ್ಲಿರುವ ಕೊಲ್ಲ ಮಾಡಿದ (ರೂಢಿ). [ದೇ. ‖ ತಮಿ. ಮಲ. ಕೊಲ್ಲ; ತುಳು. ಕೊಲ್ಲೆ]

**ಕೊಲ್ಲ$_2$** (ನಾ). ಕೊಳ್ಳ (?): ಅಲ್ಲಿಂದಂ ಮೂಡಲು ಕೊಲ್ಲದೊಳಗಣ್ಣ ವಾಮನ ಮುದ್ರೆಯ ಕಲ್ಲೇ ಗಡಿ (ಎಕ. VII, ಶಿವಮೊ. ೭೧-೩೫; 1431). [< ಕೊಳ್ಳ ?]

**ಕೊಲ್ಲಗೆಡಹು** (ಕ್ರಿ). ಕೊಂದುಹಾಕು; ಸಾಯಿಸು: ಕಪೋತನ ಕಾಲ ಹೊಯಿದು ಕೃಷ್ಣನ ಕೊಲ್ಲಗೆಡಹಿ ಹೋಗುತ್ತಿರಲಾಗಿ (ಮೋಳಮಾ. ೧೭೦-೬೭೪). [< ಕೊಲ್$_1$ + ಕೆಡಹು (< ಕೆಡಪು$_1$)]

**ಕೊಲ್ಲಗೊಲೆ** 'ಕೊಲ್ಲುಗೊಲೆ' ನೋ.

**ಕೊಲ್ಲಟಗಿತ್ತಿ** 'ಕೊಲ್ಲಟಗಿತ್ತಿ' ನೋ.

**ಕೊಲ್ಲಟಿ** (ನಾ). ದೊಂಬ; ಡೊಂಬ: ನೂಲ್ಗಟ್ಟಿ ಪೊಯ್ದು ಪೊಸಗುಡಿಸಲ್ಗಳ್ ತವೆ ನಟ್ಟ ಗಳಗಳೆರಿಸಿದದೋಳ್ಗಳ್ . . . ಇರಲ್ ಬೀಡೆಸೆದುದು ಕೊಲ್ಲಟಿ ಜನರಾ (ಉದ್ಭಟ. ೫-೧೦೧). [< ಕೊಲ್ಲಟಿಗ ?]

**ಕೊಲ್ಲಟಿಗ** (ನಾ). = ಕೊಲ್ಲಟಿ: "ಕೊಲ್ಲಟಿಗನೆಂದು ಡೊಂಬಂ" (ಕಶಸಾ. ೧೮-೩೫೬); ಗೆಲ್ಲ ಸೋಲದ ಮತ್ಸರ ಕೊಲ್ಲಟಿಗಂಗಲ್ಲದೆ ಶಿವಭಕ್ತರಿಗುಂಟೆ (ಚೆನ್ನವ. ೩೬೦); ಅರಿದಾದೊಡಮೇಂ ಕೊಲ್ಲಟಿಗರಾಟದಂತಪರಿಮಿತ ತಪಂ ಬಾರದು ಬಲ್ಲರ ಬಗೆಗೆ (ಪಾರ್ಶ್ವಪು. ೧೫-೨೧); ಕೊಲ್ಲಟಿಗರ ಸೂಳೆಯರ ಚಿತ್ರಕಲೆಗಳ ಬಲ್ಲರ ಕೇಳಿಗಳೆಸೆದವು (ಸೊಬಸೋ. ೧-೫೧); ಕೊಲ್ಲಟಿಗರಂಗನೆಗೆ ಮಚ್ಚಿ ತನ್ನಯ ಗುರುವು ಯತಿಮಾರ್ಗ ದೂರನಾಗಿ (ರಾಘಚ. ೫-೩೪). [ಕೊಲ್$_3$ + -ಅಟಿಗ]

**ಕೊಲ್ಲಟಿಗತನ** (ನಾ). ಡೊಂಬತನ; ದೊಂಬವಿದ್ಯೆ: ಕುಲ್ಲರಡೆಯಲ್ಲೋದಿ ಕೊಂಕ ತಿದ್ದುರ್ವನೆಂದು ಕೊಲ್ಲಟಿಗತನದಿಂದಲಪಶಬ್ದಮಂ ಕೂಡಿ (ಲಿಂಗಪು. ೧-೨೨). [ಕೊಲ್ಲಟಿಗ + -ತನ]

**ಕೊಲ್ಲಟಗಿತ್ತಿ, ಕೊಲ್ಲಟಗಿತ್ತಿ** (ನಾ). ದೊಂಬರವಳು; ಡೊಂಬರ ಹೆಂಗಸು: ತಂತಿಯ ಮೇಲೆ ತುದಿಗಾಲಿಟ್ಟು ನಡೆವ ಕೊಲ್ಲಟಗಿತ್ತಿಯಂತೆ (ಗಾಲಿಪ. ೧೦೫). **ಕೊಲ್ಲಟಗಿತ್ತಿ**: ಮಿಣಿಯಲ್ಲಿ ಮಣಿವ ಕೊಲ್ಲಟಗಿತ್ತಿ ತನ್ನ ಜೋಕೆಯು ತೂಕದಲ್ಲಿ ತೂಗಾಡುವಳು (ಉಯ್ಯಾಲೆ. ೬-೯); ಕಣ್ಣು ಕಟ್ಟಿಕೊಂಡು ಉಯ್ಯಾಲೆಯಿಂದ ಉಯ್ಯಾಲೆಗೆ ಜಿಗಿಯುತ್ತಿರುವ ಕೊಲ್ಲಟಗಿತ್ತಿಯ ಕಾಯಕದಂತೆ (ತುಂಗಭ. ೬೬). [ಕೊಲ್ಲಟಗ + -ಇತ್ತಿ]

**ಕೊಲ್ಲಟಗವೆಣ್** (ನಾ). = ಕೊಲ್ಲಟಗಿತ್ತಿ: ಪ್ರಿಯದಂಡಮಂಬ ಗಳಿದುದಿಯ ಮೇಲಾಡುತಿರ್ಪ ಕೊಲ್ಲಟಗವೆಣ್ಣೊ (ಚಿಬಪು. ೧೦-೬೨). [ಕೊಲ್ಲಟಗ + ಪೆಣ್]

**ಕೊಲ್ಲಡಿಗೆ** (ನಾ). (?): ಹಾರಿನಿರ್ದತಿ ಬುತ್ತಿಯು ಕಲ್ಲಿಕೊಲ್ಲಡಿಗೆ ಚೂರಿವಿಡಿ ವಿಲ್ಲುಕಡೆ ಮದ್ದು ಗಂಟಲ್ಗಾಳ ಕೋರಿ ವೇಡತಿಯರೊಡಗೂಡಿ ಶಬರವ್ರಾತಮಾರಣ್ಯಕೇಳ್ತಂದುದು (ನಂದಿಮಾ. ೧೩-೨೫). [?]

**ಕೊಲ್ಲಣ** (ನಾ). ೧. ವಿನೋದ; ಕ್ರೀಡೆ: ಮೆಲ್ಲಮೆಲ್ಲನೆ ಲಲ್ಲೆಗಜೆವ ಬಲ್ಲತನದ ಸೊಲ್ಲಸೊಗದ ಭುಲ್ಲಣೆಯ ಕೊಲ್ಲಣದೊಳೆಸೆದುಂ (ರಾಮಾಶ್ವ. ೬೩-೩). ೨. ಎಡೆಯಾಟ; ಸಂಚಾರ. ೩. ದಟ್ಟಣೆ; ಸಂದಣಿ. 'ಕೊಲ್ಲಣಿಸು' ಪರಾ. [?]

**ಕೊಲ್ಲಣಿಗೆ** (ನಾ). ೧. ಎಡೆಯಾಟ; ಸಂಚಾರ: "ಕೊಲ್ಲಣಿಗೆಯೆಂದು ಎಡೆಯಾಡುವುದು" (ಕಶಸಾ. ೨೩-೪೭೬); "ಕೊಲ್ಲಣಿಗೆಯೆ ಎಡೆಯಾಟಂ" (ಕವಿಕಂ. ೧೯೨); ಕೇವಳಿಸಿದರು ಕೊಲ್ಲಣಿಗೆಯಲಿ ಕೊಂಡರು ಸುವಸ್ತುಗಳ (ಕುವ್ಯಾಸ. ೬-೭). ೨. ದಟ್ಟಣೆ; ಸಂದಣಿ; ನೆರವಿ: ಐರಾವತದ ಕಾಲಾಟಕ್ಕೆಡೆಯಪ್ಪಂತು ಕೊಲ್ಲಣಿಗೆಯೊಳ್ ಬರ್ಪನೇಕ ... ವಾಹನಂಗಳಂ ತೆರಳೆ ತೂಳ್ದಿ ತೆಜಪಂ ಮಾಡಿಯುಂ (ಚಂದ್ರಪು.೧೨-೮೩ವ); ಕಳಕಳ ರವದ ಕೊಲ್ಲಣಿಗೆಯುರಿ [ಪಾಠಾಂ. ಘುಲ್ಲಣಿಯ] ಭಟರ ತಿಂತಿಣಿಯೊಳ್ (ಹಚಕಾ. ೧೩-೫); ಕೋಟಲೆಯ ಕೊಲ್ಲಣಿಗೆಯಲಿ ಮೈನೋಟ ಕಲಸದೆ ಬಿಸಲಲಿವರು ಮಹಾಟವಿಯ ಮಧ್ಯವನು ಹೊಕ್ಕರು (ಕುವ್ಯಾಆ. ೮-೯೪); ನಾಟವಾದುದು ಬುದ್ಧಿ ಶುದ್ಧಿಯ ಕೋಟಲೆಯ ಕೊಲ್ಲಣಿಗೆಯಲಿ ಮೇಗೋಟಿಯನು ಹತ್ತಿದನು (ತೊರರಾ. ೫-೨-೨೩); ದಳ್ಳುರಿಯ ಮುತ್ತಿಗೆಯ ಹದಗದ ಹೊಳ್ಳು ನೆರವಿಯೊ ತತ್ವವಿದ್ಯದ ಕೊಲ್ಲಣಿಗೆಗೊಡ್ಡಿಸಿದ ಮಾಯಾಮಯ ತನುಭ್ರಮೆಯೊ (ನಿಭಾಗ. ೧೦-೩೭-೫೬). ೩. ವೇಷ; ಆಟ: ಪೊಡೆವಟ್ಟಲ್ ಜೋಳಬಾ ಕೊಲ್ಲಣಿಗೆಲೆ ಕಾಳಿಂಗ ... ಎನುತೆ ಬೆಸಂಬೇಳ್ವರ್ (ಎಕ. VII, ಶಿವಮೊ. ೫-೧೪; 1218). [?]

**ಕೊಲ್ಲಣಿಗೆವರಿ** (ಕ್ರಿ). ಗುಂಪಾಗಿ ನಡೆ; ಸಂದಣಿಸಿ ಹರಿ: ಒಡಲ ಚೆಲುವುಗಳೊಡನೆ ನೋಟಕರ ದಿಟ್ಟಿಗಳು ಬಿಡದೆ ಕೊಲ್ಲಣಿಗೆವರಿದೆಡೆಯಾಡುತಿರಲಿಂತು (ಹಚಕಾ. ೪-೧೧); ಮರಳುಗಳೊಬ್ಬುಳಿಗೊಂಡು ನರ್ತಿಸುತ್ತ ಕೊಬ್ಬಿ ಕೊಲ್ಲಣಿಗೆವರಿದು ಕುಬುಬೂಯೆಂದು ಬೊಬ್ಬಿಡುತಿಹವು (ಅಂಜಚ. ೬-೧೫೩). [ಕೊಲ್ಲಣಿಗೆ + ಪರಿ$_1$]

**ಕೊಲ್ಲಣಿಸು** (ಕ್ರಿ). ೧. ಎಡೆಯಾಡು; ಸುಳಿದಾಡು; ಸಂಚರಿಸು (?): ಮೋಜೆಯೊಲೆದು ನೋಡಿ ನೃಪಸುತರಿಗೆ ಹುಬ್ಬು ಹಾಜಿಸುವಳು ನಸುನಗುತ ಹಾಱುವುದೊಡನವರೆದೆ ತನ್ನ ತೋಳಿತ್ತಿ ನೀಜೆ ಕೊಲ್ಲಣಿಸಿ ಸುತ್ತುವಳು (ಭರತ. ೧೨-೮೦); ಬಲ್ಲರ್ ಬರ್ದೆಯರೀಪರಿ ... ಬಂದಲ್ಲಣಿಗೆಗೊಂಡು ಪೊಣ್ಮುತೆ ಕೊಲ್ಲಣಿಸುವರುಱುಬಿ ನುಡಿವರುಱಿಗವೆಣ್ಗಳ್ (ಚಿಕವಿ. ೪-೩೨). ೨. ಸಂದಣಿಸು; ದಟ್ಟಣೆಗೊಳ್ಳು: ಘುಲ್ಲಿಸುವ ಪೂರಜಕೆ ನಿಲ್ಲದೆ ಕೊಲ್ಲಣಿಪ ಮಜೆದುಂಬಿಗಳ ರವವೆಲ್ಲೆಡೆಗಳಲಿ (ಉತ್ತರಾ. ೯-೫); ಎಸೆವಾ ಪುಳಿಂದಿಯರ ತನುಕಾಂತಿ ಕೊಲ್ಲಣಿಸಿ (ನಂದಿಮಾ. ೧೩-೨೭). [ಕೊಲ್ಲಣ + -ಇಸು$_1$]

**ಕೊಲ್ಲಬಿ** (ನಾ). (?): ಪೊಂಪಟಿ ... ಮಲ್ಲಬಿ, ಕೊಲ್ಲಬಿ, ಉಂಬಜಿ (ಶಬ್ದಾನು. ೧೪೦ ವ್ಯಾಖ್ಯಾ). [?]

**ಕೊಲ್ಲಾಟಿಕ** (ನಾ). ವೇಷಗಾರ (?): ಅಲ್ಲಿಗಲ್ಲಿಗೆ ಬಲ್ಲರ(ರ)ರಿಯರೆಂದು ಕೊಲ್ಲಾಟಿಕರಂತೆ ಕಥೆ, ಕಾವ್ಯವೆಲ್ಲವ ಹೇಳುವವನಲ್ಲ (ಸರ್ವಜ. ೧೨೯-೬೫೩). [?]

**ಕೊಲ್ಲಾಪುರ** (ನಾ). ಒಂದು ಊರಿನ ಹೆಸರು: ಕೊಲ್ಲಾಪುರೀ ಕೋಟಿತೀರ್ಥೇ (ಇಆ. XVI, ೨೪-೬೨; 1009). [?]

**ಕೊಲ್ಲಾಯ್ತ** (ನಾ). ವೇಷಗಾರ; ಆಟಗಾರ (?): ನಚ್ಚಣಿಗರ ಪೊಸ ಪೂವಡಿಗರ ಗರವಟಿಗರ ಕೊಲ್ಲಾಯ್ತರ ನುಡಿಗಾಜರ ಮಾಸ್ವಾರರ ಸಂದಣಿ ಸಲೆ ಸೊಗಯಿಸಿತಾಗ (ಜಯುಕಾ. ೧೨-೧೯). [? + -ಆಯ್ತ]

**ಕೊಲ್ಲಾರ, ಕೊಲಾರಿ, ಕೊಲ್ಲಾರಿ$_1$, ಕೊಲ್ಲಾರು** (ನಾ). ೧. ಸಿಂಗರಿಸಿದ ಕಮಾನು ಬಂಡಿ. ☞ ಪ್ರಯಾಣದಲ್ಲಿ ಸೊಗಸನ್ನುಂಟುಮಾಡುವುದಕ್ಕೆ ಬೇಕಾದ ತಿಂಡಿತೀರ್ಥ ಮೊದಲಾದುವುಗಳನ್ನು ತುಂಬಿದ ಎತ್ತಿನಬಂಡಿ: ತೇರಾಳಾನೆ ಕುದುರೆ ಕೊಟಗೆ ಕೊಲ್ಲಾರ ಕಾರವು ಪೊದಲಾದ ಧಾರುಣಿ ಹೊರೆಲಜೆಯದ ಸೇನೆ ಪೊಱಮಟ್ಟು (ಶ್ರೀಪಾಲ. ೧೩-೬೭); ಕೊಲ್ಲಾರ ಕೊಟ್ಟಿಗೆ ಬೊಕ್ಕಸ ಭಂಡಾರ ವೆಲ್ಲವವರಿಗೊಳಗಾಯ್ತು (ಕುರಾಸಾಂ. ೪೧-೬); ದಂಡಿಗೆ ಪಲ್ಲಕ್ಕಿ ಕುದುರೆ ಕೊಲ್ಲಾರದ ಭಂಡಿಗಳೊಲಿದೇಜೆಕೊಂಡು (ಚಂಪ್ರಸಾಂ. ೧೫-೬೬); ಕೊಟ್ಟಿಗೆ ಕೊಲ್ಲಾರ ಕೀಲಾರ ಹೊರೆಯು ತಾಳ್ದೊಟ್ಟಿಗಳ್ಪಾಸುಮಂಚಗಳು ಪೆಟ್ಟಿಗೆ ಭಂಡಾರ ಬೊಕ್ಕಸ ಸಾಗಿಬಂದು (ಭರತ. ೨೩-೪೯). **ಕೊಲಾರಿ**: ೧. ಹೊಲ್ಲಿಯ ಭಂಡಿ ಕೊಲಾರಿ ರಥಂಗಳು ಮೇಲಾನೆ ಕುದುರೆ ವೈಯಾಳಿ (ಅಮುಸಾಂ ೧-೮೧). **ಕೊಲ್ಲಾರಿ$_1$**: ೧. ಜಾರಿಸುವ ಮೊಗಸೂನಿಗೆಯ ಕೊಲ್ಲಾರಿಗಳ ಶರಬಂಡಿಗಳ ಹೊಂದೇರು ಕವಿದುವು (ಕುವ್ಯಾಶ. ೨-೪೪); ಅಂಗನಾನೀಕದಂದಣಂ ಕೊಲ್ಲಾರಿಗಳ ಕೌವ್ವರಿಯೊಳು ನಡೆದರು ಸೊಗಸಿನಿಂ (ಜೀರಮು. ೫-೨೧). ೨. ಬಂಡಿಯ ಬಿದಿರಿನ ಕಮಾನು: ಮೇಲಿನ ಕೊಲ್ಲಾರಿಗೆ ಗೊಂಡೆಗಳನ್ನು ಕಟ್ಟಿ (ಗಂಗಾಸಾ. ೪೯); ಒಂದು ಎತ್ತಿನ ಬಂಡಿ ಕೊಲ್ಲಾರಿ ಬಿಗಿಸಿಕೊಂಡು ಗುಡಾರ ಹೊದೆಯಿಸಿಕೊಂಡು ನಿಂತಿತ್ತು (ಭೂವಿತಾ ೬೫). **ಕೊಲ್ಲಾರು**: (೬). [?. / ತೆಲು. ಕೊಲಾರು, ಕೊಲ್ಲಾರು]

**ಕೊಲ್ಲಾರಬಂಡಿ, ಕೊಲ್ಲಾರಭಂಡಿ, ಕೊಲ್ಲಾರಿಬಂಡಿ** (ನಾ). ಕೊಲ್ಲಾರದ ಬಂಡಿ; ಕಮಾನುಗಾಡಿ: ಕೊಟ್ಟಿಗೆ ಕೊಲ್ಲಾರಬಂಡಿ ಕೀಲಾರವ ನೆಟ್ಟನೆ ನೃಪ ತೆರಳಿಸಿದ (ನಾಗಕು. ೩-೭೦); ಕೊಟ್ಟಿಗೆಯ ಕೊಲ್ಲಾರಬಂಡಿಗಳ ಮೇಲೆ ಸರಕಿಟ್ಟಣಿಸಿ ನೂಕಿದುದು (ಜೈಮಿಭಾ. ೬-೫). ಝುಗಝುಗಿಸುವ ಕಾಂತಿಯಿಂದ ಸೊಗಯಿಸುವ ಕೊಲ್ಲಾರಬಂಡಿಯ ಲೆಕ್ಕವಬಗೆವನಾರಾ ದಂಡಿನೊಳಗೆ (ಕಂಸವ. ೧೧-೩೩) **ಕೊಲ್ಲಾರಭಂಡಿ**: ಸ್ವಾದು, ಗುಡ, ಶರ್ಕರಾ ಪರಿಪೂರ್ಣವಾಗಿರುವ ಸಾವಿರ ಕೊಲ್ಲಾರ ಭಂಡಿಗಳನ್ನು ತಂದು (ಕೃವಾಸ. ೧೧೯). **ಕೊಲ್ಲಾರಿಬಂಡಿ**: ಕೊಲ್ಲಾರಿ ಬಂಡಿಯೊಳ್ ತನ್ನೆಲ್ಲಾ ಪುಸ್ತಕಮನಿಡಿದುತಂದು (ದಿವ್ಯಸೂ. ೧೩-೮); ನಿಬ್ಬಣಕೆ ಹೊರಟಂತೆ ಹಾಡುಗಬ್ಬಗಳ ಕೊಲ್ಲಾರಿಬಂಡಿ (ನೆಲಮು. ೩೩). [ಕೊಲ್ಲಾರ + ಬಂಡಿ]

**ಕೊಲ್ಲಾರಭಂಡಿ** 'ಕೊಲ್ಲಾರಬಂಡಿ' ನೋ.

**ಕೊಲ್ಲಾರಿ$_1$** 'ಕೊಲ್ಲಾರ' ನೋ.

**ಕೊಲ್ಲಾರಿ$_2$** (ನಾ). "ಮುಖಂಡರು, ಹುದ್ದೇದಾರರು, ಪ್ರಮುಖರು" (ಚಿತ್ರಪಾ. ಕೋಶ): ಈ ಮೂರು ಜನ ಅಣ್ಣತಮ್ಮಂದಿರು ... ತುರು, ಕುರಿ, ಕೊಲ್ಲಾರಿ ಮುಂತಾದ ಕಂಪಳವನ್ನು ತೆರಳಿಸಿಕೊಂಡು ದಕ್ಷಿಣ ದೇಶಕ್ಕೆ ಬಂದರು (ಚಿತ್ರಪಾ. ೪). [?]

**ಕೊಲ್ಲಾರಿಚಕ್ಕಡಿ** (ನಾ). = ಕೊಲ್ಲಾರಬಂಡಿ: ಕೊಲ್ಲಾರಿ ಚಕ್ಕಡಿಗೆ ಹೂಡಿರುವ ಎತ್ತುಗಳ ಕೊರಳ ಗೆಜ್ಜೆಯ ಸರವು ಟಂಟಣಿಸಲು (ಭಾವಜೀ. ೫-೯೩). [ಕೊಲ್ಲಾರಿ$_1$ + ಚಕ್ಕಡಿ$_1$]

**ಕೊಲ್ಲಾರಿಬಂಡಿ** 'ಕೊಲ್ಲಾರಬಂಡಿ' ನೋ.

**ಕೊಲ್ಲಾರು** 'ಕೊಲ್ಲಾರ' ನೋ.

**ಕೊಲ್ಲಾಸೆ** (ನಾ). ಕೊಲ್ಲುವ ಆಸೆ: ಬಿಲ್ಲಾಸೆ ಬೇಡಂಗೆ ಕೊಲ್ಲಾಸೆ ಕಟುಗಂಗೆ ಬೆಲ್ಲದ ಆಸೆ ಬಾಲರಿಗೆ (ಸರ್ವಜ್ಞ. ೧೯೦೭). [ಕೊಲ್$^1$ + ಆಸೆ]

**ಕೊಲ್ಲಿ, ಕೊಲ್ಲೆ$_1$** (ನಾ). ೧. ವಕ್ರವಾದುದು; ಕೊಂಕು; ಓರೆ: "ಕೊಲ್ಲಿ [ಪಾಠಾಂ. ಲ್ಲೆ]ಯೆಂದು ವಕ್ರಂ" (ಕಶಸಾ. ೨೩-೪೭೪); "ಕೊಲ್ಲಿಯೆನಲ್ ವಕ್ರಮಕ್ಕು" (ಕವಿಕಂ. ೧೯೨). 'ಕೊಲ್ಲಿನೋಟ' ಪರಾ. ೨. ಅಗಡು; ತೊಂಡು; ಪೋಲಿ: ಅಗಡನಗಡು ಮಾಡದೆ ಬೇಡಿದುದನಿತ್ತು ತೆಗೆದು ಕಟ್ಟದರೆ ಕಟ್ಟನಲಿ ಸಿಕ್ಕಿ ಬೆಗಡಗೊಳ್ಳದೆ ಕೊಲ್ಲಿಯಂತೆ ಹೇಳಿದ ಕಡೆಗೆ ಸೊಗಿಸಿನಿಂ ಬಹುದಾಗಲಿ (ಭಕ್ತಿಸ. III; ೨೬-೩). 'ಕೊಲ್ಲಿಯಾವು' ಪರಾ. ೩. ಚಿಕ್ಕಪ್ರವಾಹ; ಹಳ್ಳ: ಕೆಱೆ ಕೊಲ್ಲಿಸಹಿತ (ಎಕ. III, ಮಂಡ್ಯ. ೧೧೩-೬೦; 713); ಮೂಡಾ ಯ್ಹೋಡಿ ನೀರಿಱಿವೆ ತಾಱೆವೋಗಿ (ಎಕ. XVI, ಗುಬ್ಬಿ. ೭೫-೫೨; 733); ನಮ್ಮೂರ ಕೊಲ್ಲಿಯ ಹತ್ತಿರದ ಮರಳನ್ನು ಒಂದರಿಯಾಡಿ . . . ಸೇರು ಕಟ್ಟಿಕೊಂಡು ಬಂದರು (ನಮ್ಮೂರ. ೨೦). ೪. ಭೂಮಿಯೊಳಕ್ಕೆ ನುಗ್ಗಿರುವ ಸಮುದ್ರದ ಭಾಗ: ಕೆಳಗಣ ಕೊಲ್ಲಿಯಲ್ಲಿ ನಿಂತಿರುವ ಎರಡು ಯುದ್ಧನೌಕೆಗಳ ಧ್ವಜಸ್ತಂಭಗಳು ಕಾಣುತಿವೆ (ಆರ್ಯಕ. ೧); ಪರ್ಷಿಯಾ ಕೊಲ್ಲಿಯಲ್ಲಿ ದೊರೆಯುವ ಕಪ್ಪುಹವಳವು ಕೆಂಪು ಹವಳಕಿಂತಲೂ ಗಟ್ಟಿ (ಪ್ರಾಣಿಶಾ. ೧೩೧); ಬಂಗಾಳ ಕೊಲ್ಲಿ (ರೂಢಿ). ೫. ಒಂದು ಬಗೆಯ ಪಾತ್ರೆ (?): ಮತ್ತೆ ಕಲಸುತ ಪಡಗದಿಂ ಘಟದಿ ಕೊಡಗಳಿಂ ಮತ್ತೆ ಕೊಪ್ಪರಿಗೆಯಿಂ ತಾಂಬ್ರ ಕೊಲ್ಲಿಯಿಂ (ಲಿಂಗಪು. ೩೩-೧೪). **ಕೊಲ್ಲೆ$_1$**: ೧. 'ಕೊಲ್ಲೆನೋಟ' ಪರಾ. ೬. ಮೂಲೆ; ತುದಿ: ಸಭಾಸಾಗರದ ಕಡೆಯ ಕೋಹಿನ ಕೊಲ್ಲೆಯೊಳ್ ನಿಂದು (ಚಿಬಪು. ೩೦-೧೫).

[ದೇ. ‖ ಮಲ. ತುಳು. ಕೊಡ. ಕೊಲ್ಲಿ; ತೆಲು. ಗೊಲ್ಲಿ]

**ಕೊಲ್ಲಿಆವು** 'ಕೊಲ್ಲಿಯಾವು' ನೋ.

**ಕೊಲ್ಲಿತನ** (ನಾ). ಒರಟುತನ; ವಕ್ರತೆ; ತುಂಟಾಟ: ಇಂದೇತ ಕೊರ್ಸೆಯ ಕೊಲ್ಲಿತನವನು ತಳೆದು ನನ್ನೊಳು ಸೊಲ್ಲಸೊಂದನು ಸೊಲ್ಲಿಸದೆ ಬಿಗಿವಿಡಿದೆ ಮೌನವನು (ಅಂಜಚ. ೩-೪೪). [ಕೊಲ್ಲಿ + -ತನ]

**ಕೊಲ್ಲಿನೋಟ, ಕೊಲ್ಲೆನೋಟ** (ನಾ). ಓರೆನೋಟ; ಕಡೆಗಣ್ಣೋಟ; ಕಟಾಕ್ಷ: ಕವಿರಾಜಮಲ್ಲಂಗೆ ಕೊಲ್ಲಿನೋಟಮಂ ಪಸಾಯಮಿತ್ತು ಲೀಲಾವತಿಯಿಂತೆಂದಳ್ (ಲೀಲಾವ. ೧೩-೫೪ವ); ಸಲ್ಲಲಿತಾಂಗಿಯ ಕೊಲ್ಲಿನೋಟದೆ ಸಿಲ್ಕಿ ತಲ್ಲಣಿಪುದು ವಿಟನಿಕರ (ಅಂಜಚ. ೩-೫೭); ತಮ್ಮ ಬೆಲ್ಲೆಗಂಗಳ ಕೊಲ್ಲಿನೋಟದ ವಿಳಾಸಮಂ ಬೀಱುತ್ತೆ (ನಾಗಕು. ೨-೨೫ವ); ಬೆಳುನೋಟವಾವಾಗ ಬಿಱುನೋಟವಾವಾಗ ಸೆಳೆನೋಟವಾವಾಗ ಸೆಳೆನೋಟ ಕೊಲ್ಲಿನೋಟಗಳು . . . ಆವಾಗವೆಂದೊಳು ನೋಟವೆರಸಿ ಪಾಡಿದಳು (ಭರಚ. ೧೧-೩೧). **ಕೊಲ್ಲೆನೋಟ**: ಹುಲ್ಲೆಗಂಗಳ ಕೊಲ್ಲೆನೋಟದ ವನಿತೆಯರೆಲ್ಲ ನೋಡುತ್ತಲಿರಲವನ (ಜಿನರಾ. ೯-೧೨೧). [ಕೊಲ್ಲಿ + ನೋಟ]

**ಕೊಲ್ಲಿಯಾವು, ಕೊಲ್ಲಿಆವು** (ನಾ). ಅಗಡು ಹಸು; ತೊಂಡು ಆವು: ಕೊಲ್ಲಿಯಾವಿನಲ್ಲಿ ಸಲ್ಲೀಲೆಯನಱಿಸುವಂತೆ (ಮೋಳಿಮಾ. ೨೦೦-೭೪೭). **ಕೊಲ್ಲಿಆವು**: ಕೊಲ್ಲಿಆವಿಂಗೆ ಕಾಲ ಕಟ್ಟುವರಲ್ಲದೆ ಮೊಲೆಯ ಕಟ್ಟಿದರುಂಟೆ ಅಯ್ಯಾ (ಅಱಿಮಾ. ೨೬೫). [ಕೊಲ್ಲಿ + ಆವು]

**ಕೊಲ್ಲಿವಲೆ** (ನಾ). ಒಂದು ಬಗೆಯ ಬಲೆ: ಗೂಡುವಲೆ ಜಲ್ಲಿವಲೆ ಕೊಲ್ಲಿವಲೆ ಕರಿಯ ಜವಿವಲೆ ಮುಸುಕುವಲೆ ಬಿತ್ತರದ ನೇಣ್ವಲೆ (ಸಾಳ್ವಭಾ. ೫-೧೯). 'ಕೋಲ್ವಲೆ' ಪರಾ. [ಕೊಲ್ಲಿ? + ಬಲೆ$_1$]

**ಕೊಲ್ಲಿಸು** 'ಕೊಲಿಸು' ನೋ.

**ಕೊಲ್ಲು** 'ಕೊಲ್$^1$' ನೋ.

**ಕೊಲ್ಲುಗ** (ನಾ). ಕೊಲ್ಲುವವನು; ಕೊಲೆಗಾರ; ಕಟುಕ: ಕೆತ್ತುಗ ಕಾಟುಗ ಕೊಲ್ಲುಗ [ಪಾಠಾಂ. ಪೋಲುಗ, ಹೊಲ್ಲುಗ, ಹೊಸ್ನುಗ, ಹುಲ್ಲುಗ, ಪೋಲಿಗ]ನೆಂಬುದು ಎನ್ನ ಹೆಸರಯ್ಯ (ಬಸವ. ೩೩೫).

[ಕೊಲ್ಲು (< ಕೊಲ್$^1$) + -ಗ$_3$]

**ಕೊಲ್ಲುಗೊಲೆ, ಕೊಲ್ಲಗೊಲೆ** (ನಾ). ಕ್ರೂರವಾದ ಕೊಲೆ; ಕಗ್ಗೊಲೆ: ಚೆಲ್ಲವಾಡುತ ದನುಜಸೇನೆಯ ಕೊಲ್ಲುಗೊಲೆಯನು ಕೊಂದು ಕೂಗುತ (ಕಾಶಿರಾ. ೨೦-೬೯). **ಕೊಲ್ಲಗೊಲೆ**: ಪಾಪಿ ತಕ್ಷಕಂ ವಿಪ್ರನಂ ಮರಳಿಚಿ ಕೊಲ್ಲಗೊಲೆಯಂ ಕೊಂದನಯ್ಯನಂ ವಿಪ್ರಸುತನೆಲ್ಲವನು ಕೊರಳ ಕೊಯ್ದ್ಪವನೆಂದು ಕಿಡಿಗೆದರಿ ಹಲ್ಲ ಕಡಿದಾಡಿದನು (ತುರಂಗ. ೬-೨೫).

[ಕೊಲ್ಲು (< ಕೊಲ್$^1$) + ಕೊಲೆ$_2$. / ತಮಿ. ಕೊಲ್ಲುಕ್ಕೊಲೈ]

**ಕೊಲ್ಲೆ$_1$** 'ಕೊಲ್ಲಿ' ನೋ.

**ಕೊಲ್ಲೆ$_2$** (ನಾ). ರೆಂಬೆ; ಕೊನೆ; ಕೊಂಬೆ: ಪಣ್ತ ಮಾವುರದ ಕೊಲ್ಲೆಯೊಳು ದಂಪತಿಗಳೆರಡು ಗಿಳಿಗಳು ಫಲವ ಮೆಲ್ಲುತಿರಲು (ಪ್ರಾಭರಾ. ೫-೨೭); ಅಗಿಗಳನ್ನು ಇಲ್ಲವೆ ಕೊಲ್ಲೆಗಳು ಅಥವಾ ಅಂಟುಗಳನ್ನು ತರಿಸಿ (ಕೃಷಿಪ್ರ. ೧೪೩).

**ಕೊಲ್ಲೆನೋಟ** 'ಕೊಲ್ಲಿನೋಟ' ನೋ.

**ಕೊಲ್ಲೈಸು** (ಕ್ರಿ). ಓರೆಯಾಗು; ಪಕ್ಕಕ್ಕೆ ಸರಿ; ಹೊರಳು: ಅಲ್ಲಿದ್ದ ಕಂಭವ ತಾಗೆಂದು ಬಿಡೆ ಕಂಭದಲ್ಲಿ ನೆಟ್ಟಿತು ಬಾಣ ಬಂದು ಕೊಲ್ಲೈಸಿ (ಭರಚ. ೨೪-೬೧). [ಕೊಲ್ಲೆ$_1$ (< ಕೊಲ್ಲಿ) + -ಇಸು$_1$]

**ಕೊಲ್ಸೇಡುಗೊಳ್** (ಕ್ರಿ). (?): ನೆವದಿಂ ಕಾಯ್ದು ಕನಲ್ದು ಪೋದನಿನಯನಂ ಕಣ್ಮುಟ್ಟನೊಳ್ ಕಂಡು ಕೈರವಪತ್ರಾಯತನೇತ್ರೆ ಕೀಲಿಸಿದವೊಲ್ ಕೊಲ್ಸೇಡುಗೊಂಡಳ್ ಚಳತ್ಪವನಾಪಾತಪತಾಕೆವೊಲ್ ನಡುಗಿದಳ್ (ಅನಂಪು. ೮-೨೨).

[P ಇದು 'ಕೊಳ್ಸೇಡುಗೊಳ್' ಎಂಬುದರ ಅಪಲಿಖಿತವಿರಬಹುದು]

**ಕೊವಯ** (ನಾ). ಒಬ್ಬಾತನ ಹೆಸರು: ಕೊಳವರ ಕೊವಯನ್ ಗೌತಮುಸ್ವಾನಕೆ ಕೊಟ್ಟದು ಸೊಡರುಂ ಸಾಲೆಯುಂ (ಎಕ. VII, ಶಿಕಾರಿ. ೪೫-೫೨; 890). [?]

**ಕೊವರ$_1$, ಕುವರ$_1$** (ನಾ). ಕುಂಬಾರ: "ಕೊ[ಪಾಠಾಂ. ಕು]ವರಂ ಬಾಂಬಂ ಕುಂಬಜಂ" (ಚತುನಿ. ೧೦೪). **ಕುವರ$_1$**: ಮೇಲಿನ ಪ್ರಯೋಗದ ಪಾಠಾಂತರವನ್ನು ನೋಡಿ. [?]

**ಕೊವರ$_2$** 'ಕುವರ$_2$' ನೋ.

**ಕೊವರಪೆ** (ನಾ). ಒಂದು ಸ್ಥಳದ ಹೆಸರು: ಕೊವರಪೆಯ ಚಿಂಪಯ್ಯನುಂ ಲೋಕಯ್ಯನುಂ ಕೊಟ್ಟಾರದ ಮಾರಪುಲಿಯುಂ (ಎಕ. XII, ಶಿರಾ. ೨೪-೫೦; 943). [?]

**ಕೊವರಾಚಾರಿ** (ನಾ). ಒಬ್ಬಾತನ ಹೆಸರು: ಅಕ್ಕರಂಬೊಯ್ದ ಕೊವರಾಚಾರಿಯ ಮಗಂ (ಎಕ. IX, ಹೊಸಕೋ. ೧೧೧-೯; 997).

[ಕೊವರ$_2$ (< ಕುವರ$_2$) + ಆಚಾರಿ]

**ಕೊವರಿ** 'ಕುವರಿ' ನೋ.

**ಕೊವರೆಯ** (ನಾ). ಒಬ್ಬಾತನ ಹೆಸರು: ಗವುಣ್ಡನ ಮಗ ಕೊವರೆಯ . . . ಪಲರನಿಱಿದು ಸ್ವರ್ಗಾಲಯ ಪೊಕ್ಕನ್ (ಎಕ. X, ಚಿಂತಾಮ. ೩೭-೩; 885). [ಕೊವರ$_2$ (< ಕುವರ$_2$) + ಅಯ$_1$ (< ಅಯ್ಯ$_1$)]

**ಕೊವಳಲ** 'ಕುವಲಾಲ' ನೋ.

**ಕೊವಳಾಲಪುರ** 'ಕುವಲಾಲಪುರ' ನೋ.

**ಕೊವಳಾಳಪುರ** 'ಕುವಲಾಲಪುರ' ನೋ.

**ಕೊವಳಾಲಿ** 'ಕುವಲಾಲಪುರ' ನೋ.

**ಕೊವಳಿ** (ನಾ). ಒಬ್ಬಾತನ ಹೆಸರು : ಲಾವಣ್ಯದ ರಾಮ ಸರಳಾಚಾರಿಯ ಮಗ ಕೊವಳಿಯಲಿಕೆ (ಎಕ. X, ಮಾಲೂರು. ೯೪-೧೩ ; 950). [?]

**ಕೊವಳಿವೆಟ್ಟು** (ನಾ). ಒಂದು ಊರಿನ ಹೆಸರು : ಕೊವಳಿವೆಟ್ಟು ನಾಮಗ್ರಾಮ ಬ್ರಹ್ಮದೇಯಂ ದತ್ತಃ (ಮೈಆರಿ. ೧೯೨೭, ೧೧೮-೪೩ ; 726). [ಕೊವಳೆ$_0$ + ಬೆಟ್ಟು$_2$]

**ಕೊವಳ್ಳ** (ನಾ). ಒಂದು ಪ್ರದೇಶದ ಹೆಸರು (?) : ತೊಱೆಯು ಆಲರೆ ಮೇರೆ ದುವೆಟ್ಟಗೆ ನಿಜುಕಲ್ಲು ಕೊವಳ್ಳದಾ ಪೆರಿಯ ಎಲವು ಅಲ್ಲಿಂ ಕೂಡಿತ್ತು (ಎಕ. II, ೩೫-೬ ; 800). [?]

**ಕೊವುಜಗೆಱೆ** (ನಾ). ಒಂದು ಊರಿನ ಹೆಸರು : ಕೊವುಜಗೆಱೆಯ ಗವುಣ್ಡ ಬಳ್ಳಜ್ಜನ್ತನ್ನ ಮಡಿಸಿದ ದೇಗುಲಕೆ ಬಿಟ್ಟ ಕೆಯಂ (ಸೌಇಇ. XI-i, ೩೫-೩ ; 933). [ಕೊವುಜ ? + ಕೆಱೆ]

**ಕೊವೆಗೆಱೆ** (ನಾ). ಒಂದು ಕೆರೆಯ ಹೆಸರು : ಕೊಮಾರ ಭೋಗನಾಥ ದೇವರಿಗೆ ಕೊವೆಗೆಱೆಯ ಕೆಳಗಣ ಅಡಿಕೆಯ ತೋಟವನೂ (ಎಕ. III, ನಂಜನ. ೧೫೧-೬ ; ?). [ಕೊವೆ ? + ಕೆಱೆ]

**ಕೊವ್ವರಿ** 'ಕೊವ್ವರೆ' ನೋ.

**ಕೊವ್ವರೆ, ಕೊವ್ವರಿ** (ನಾ). = ಕವ್ವರೆ. 'ಕೊವ್ವರೆಗೊಳ್' ಪರಾ. ಕೊವ್ವರಿ : "ಮುಸುಬು" (ಚತುನಿ. ಕ. I, ೩೩). [< ಕವ್ವರೆ]

**ಕೊವ್ವರೆಗೊಳ್** (ಕ್ರಿ). = ಕವ್ವರೆಗೊಳ್ ಳ : ಮತ್ತೊಂದೆಡೆಯ ಕೊವ್ವರೆಗೊಂಡು ನೋಡುವ ಮೊತ್ತದ ಕೆಳದಿಯರಿರಲು (ಅನಂಚ. ೧೧-೨೦). [ಕೊವ್ವರೆ + ಕೊಳ್$_1$]

**ಕೊಸಂಟು** (ನಾ). ವಕ್ರವಾದ ಮಾತು (?) : ನಾಡ ತಕ್ಕ ಕೊಂಕು ಕೊಸಂಟುಗಳನ್ನೆತ್ತದೆ ನೇರಾಗಿ ಮಾತಾಡಿದುದನ್ನು ಕೇಳಿ ನಾಯಕ ಉತ್ತನಿಗೆ ಬಹಳ ಸಂತಸವಾಯಿತು (ಹುಲಿಹಾ. ೧೮೫). [?]

**ಕೊಸಕಿಲು, ಕೊಸಗಿಲೆ** (ನಾ). ಒಂದು ಬಗೆಯ ಹೂವು : ಕತ್ತರಿ ವೀಲಿಯನು ತಲೆಸುತ್ತಿ ಕಿವಿಯಲಿ ಕೊಸಕಿಲನು ಧರಿಸಿ . . . ನೀಲಮೇಘ ಶ್ಯಾಮ ತಾ ಹೋದನಿದೆ ವನಾಂತರಕೆ (ನಿಭಾಗ. ೧೦-೧೯-೨೬). ಕೊಸಗಿಲೆ: ಕೊಸಗಿಲೆಯುರಳ ವಿಕರ್ಣಗಳಿಂದ (ಜ್ಞಾನಚ. ೨೫-೬೫). [?]

**ಕೊಸಕು** 'ಕೊಸಗು' ನೋ.

**ಕೊಸಗವೆಟ್ಟು** (ನಾ). ಒಂದು ಸ್ಥಳದ ಹೆಸರು : ಮೂಡಾಯ್ ಬೆಟ್ಟಿನ ಪೊರೆಯನೆ ಬನ್ದತ್ತು ಕೊಸಗವೆಟ್ಟಿನೊಳ್ ಕುಡ್ಕೆಅತ್ತೆ (ಎಕ. IV, ಹೆಗ್ಗಡ. ೪-೨೯ ; 750). [ಕೊಸಗ ? + ಬೆಟ್ಟು$_2$]

**ಕೊಸಗಿಜೆ** (ನಾ). ಒಂದು ಜಾತಿಯ ಮರ : ಮುಳ್ತುಗ ಸಸಿವಾರೊಡವಾರ ಕಂಚಿಯಾಲದ ಗಡಣಂ ಕೊಸಗಿಜೆ ಬಸಿಱೀ ಹುಲಗಿಲ್ಗೊರವೀ (ಹಮ್ಮೀರ. ೪-೬೮). [< ಕೊಸಗಿಲೆ ?]

**ಕೊಸಗಿಲೆ** 'ಕೊಸಕಿಲು' ನೋ.

**ಕೊಸಗು, ಕೊಸಕು** (ನಾ). ಬೆಟ್ಟದಾವರೆ; ಕರ್ಣಿಕಾರ : "ವೃಕ್ಷೋತ್ಪಲಃ, ಕರ್ಣಿಕಾರಃ – ಈ ೨ ಕೊಸಗು" (ಹಲಾಯು. ೩೩-೪೬); "ದ್ರುಮೋತ್ಪಲಃ, ಕರ್ಣಿಕಾರಃ, ಪರಿವ್ಯಾಧಃ – ಈ ೩ ಕೊಸಗಿನ ಮರ" (ನಾಚಿರಾ. ೧೦೮); "ಬೆಟ್ಟದಾವರೆ ಕೊಸಗೆಂದು ಱೆ ಕರ್ಣಿಕಾರ" (ಕವಿಕಂ. ೫೫); ಪೊಸತಲರ್ದ ಕೊಸಗು ತಳಿರ್ವೋದಸುಗೆ (ಆದಿಪು. ೧೧-೮೫); ಕೊಸಗು ಪಾದರಿ ನೇಱಲ ಶೋಕ ಬಾಳೆಯೆಂಬಂಕದ ವೃಕ್ಷಜಾತಿಗಳಿಂ (ಎಇ, XVI, ೩-೪ ; 980); ಕೊಸಗಿನೆಸಱ ಕೇಸರಮಂ ತೊಡರ್ಚಿದ ಶೋರಮಲ್ಲಿಗೆಯ (ಜಗವಿ. ೬-೧೬); ಪೂಸರಂಗಬಡೆದ ಕೊಸಗಿನ ಮರಳೊಳಂ (ಕಬ್ಬಿಗಾ. ೮೯). ಕೊಸಕು : ಬಸಿರಿ ಬನ್ನಿ ಕೊಸಕು ಕಂಮರೆ . . . ವೃಕ್ಷಂಗಳನು (ಕೃವಾಅ. ೨೨೮); ಇರುವಂತಿಗೆ ಶಾವಂತಿಗೆ ಕೊಸಕು ಕಾಡುಕೊಸಕು . . . ಲತೆಗಳಿಂದಲಿ (ಕೃವಾಸ. ೫೧).

**ಕೊಸರ್, ಕೊಸರು$_1$** (ಕ್ರಿ). ೧. ಹಿಡಿತದಿಂದ ಬಿಡಿಸಿಕೊಳ್ಳು; ಜಾರಿಕೊಳ್ಳು : "ಕುಂಶಯತಿ – ಕೊಸರ್ದಪಂ" (ಕಾಶಕೃ. ೨೮೦). ಕೊಸರು$_1$ : ೧. ಮದನ ಕಲಹದೊಳೊಲ್ದು ಕೊಸರಿ ಪಣಗುವ ಸತಿಯುವೋಲ್ಪೆಣಗಿದುವು ಶಿವನೊಳು (ಅರಾಚ. ೧೧-೩೮); ಮೂದಲಿಕೆ ಮುದ್ದು ಕೊಸರುವ ಮೋಡಿ (ವೆಂಕಾರಾ. ೫-೬-೪೩). ೨. ಎಳೆ; ಜಗ್ಗು; ಸೆಳೆ : ಉಗ್ರ ಖಡ್ಗಂ ಕರದೊಳೊದಱುತಿದೆ ಯಮಸದಂಡಂ ನಿಮಿರ್ದು ನಿರುತಿ ಕೊಂತಂ ಕೊಸರುತಿದೆ ಕೈಯನು (ಚೆಬಪು. ೨೧-೨೫); ಗಿಡಗಳನ್ನು ಕೊಸರಿ ಮುರಿದ ಹಸ್ತ (ವಿದಾಕೃ. ೬೮-೧). ೩. ಉಬ್ಬೇಳು; ಉತ್ಕಟವಾಗು; ಅಧಿಕವಾಗು : ಕೊಸರಿ ನೀ ಹೊಗಳ್ವ ಹರನುಂ ಕೇಳುವೀ ಮುನಿಪ್ರಸರಮುಂ (ಸಿದ್ಧರಾ. ೪-೬೦). 'ಕೊಸರಿಕೆ' ಪರಾ. ೪. ಹೆಚ್ಚಾಗಿ ಹೇಳು; ಅತಿಯಾಗಿ ಹೇಳು : ಕೊಸರಿದಳು ನಂದನನ ನಿಜಗುಣವ (ತೊರರಾ. ೬-೪೫-೨೮); ರತ್ನಾಜಿ ಗಂಡನ ಮುಂದೆ ಚಾಡಿ ಕೊಸರುತ್ತಾಳೆ (ನಂಜುಂಡ. ೧೧೨). ೫. ಜರಿದುಬೀಳು; ಕುಸಿ (?) : ಮುಸುಱತು ಕೋಂಟೆಯುಂ ಮಸಗಿ ಜೇಂಬುಱುಗಳ ಪೊಸವುಟ್ಟೆಯಂತೆ ಮೇಣ್ ಕೊಸರಿತು ಕೊತ್ತಳಂ ಪುಲಿಮೊಗಂ ಮುಗಿಲಟ್ಟಳೆಯುಗ್ಗಳಂಗಳಂ (ಚಿಕವಿ. ೨-೧೦೬).

ಕೊಸರಿಕೊಳ್ಳು = ಕೈಕೊಡವಿ ತಪ್ಪಿಸಿಕೊಳ್ಳು; ಒದರಿ ಬಿಡಿಸಿಕೊಳ್ಳು : ರಾಧೆ ಕೃಷ್ಣನ ಕೈ ಕೊಸರಿಕೊಂಡು ಓಡುವಳು (ಗೋಕುನಿ. ೩೭); ಅವಳು ಕ್ರೋಧಸಂತಪ್ತಳಾಗಿ ಅವನ ಕೈಯಿಂದ ಕೊಸರಿಕೊಂಡು ದೂರ ಸರಿದು ನಿಂತಳು (ಅಂಬಿಕೆ. ೩೨); ದಯಾವತಿ ಕೊಸರಿಕೊಂಡು ಸೆರಗು ಬಿಡಿಸಿಕೊಂಡಳು (ಜವಿಾನ್ನಾ. ೧೨೯). [?]

**ಕೊಸರಾಟ** (ನಾ). (ವ್ಯಾಪಾರದಲ್ಲಿ) ಹೆಚ್ಚು ಕಡಮೆ ಕೇಳುವಿಕೆ; ಚೌಕಾಸಿ ಮಾಡುವಿಕೆ : ನಾಲ್ಕಾಣೆಗೆ ಕೊಸರಾಟ (ರೂಢಿ). [ಕೊಸರು$_2$ + ಆಟ]

**ಕೊಸರಾಡು$_1$** (ಕ್ರಿ). ತಪ್ಪಿಸಿಕೊಳ್ಳಲು ಪ್ರಯತ್ನಿಸು; ಎಳೆದಾಡು; ಜಗ್ಗು : ಗೂಬೆ ಕೊಸರಾಡಿತು. ಆಗ ಕುಣಿಕೆ ಬಿಗಿಯಾಯಿತು (ಪುಟ್ಟರ. ೪೯). [ಕೊಸರು$_1$ (< ಕೊಸರ್) + ಆಡು$_1$]

**ಕೊಸರಾಡು$_2$** (ಕ್ರಿ). ಹೆಚ್ಚಾಗಿ ಬೇಕೆಂದು ಕೇಳು, —ಪೀಡಿಸು : ಅವಳು ಕೊಟ್ಟ ಹಣವು ಸಾಲದೆಂದು ಕೊಸರಾಡಿದಾಗ (ನಡೆದಾ. II, ೯೨೯). [ಕೊಸರು$_2$ + ಆಡು$_1$]

**ಕೊಸರಿ** (ನಾ). ಒಂದು ಬಗೆಯ ಸಸ್ಯ : "ಅಶ್ಮವಿಟ – ಕೊಸರಿ, ಯಮೆ" (ಓಷಧಿ. ೬). [?]

**ಕೊಸರಿಕೆ** (ನಾ). ಹೆಚ್ಚಳ; ಆಧಿಕ್ಯ; ಅತಿಶಯ : ಭುಜವನು ಹೊಯ್ದು ಹೊರೆಯೇಱ ಅಸಮ ಸಮ ಪಯಪಾಡಿನಲಿ ಬಾರಿಸಿದ ಮುಷ್ಟಿಯ ದೃಷ್ಟಿವಾಳದ ಕೊ[ಪಾಠಾಂ. ಹ] ಸರಿಕೆಯ ಕೋಪದಲಿ ಕೈಕೊಂಡನು ಮಹಾಹವಕೆ (ತೊರರಾ. ೬-೩೩-೧೩). [ಕೊಸರ್ + –ಇಕೆ]

**ಕೊಸರಿಡು** (ಕ್ರಿ). ಕೊಡಹು; ಒದರಿಹಾಕು; ಕಿತ್ತು ಬಿಸಾಡು : ಗಬ್ಬಿತನದಿ ಘನಗರ್ವದಿ ಮಲೆವರ ಕೊಬ್ಬ ಮುಱಿದು ಕೊಸರಿಡುತಾ (ಸೌಂದಕಾ. ೧-೬೧). [ಕೊಸರ್ + ಇಡು$_1$]

**ಕೊಸರು$_1$** 'ಕೊಸರ್' ನೋ.

**ಕೊಸರು$_2$** (ಕ್ರಿ). ೧. ಮತ್ತೆ ಮತ್ತೆ ಬಯಸು; ಇನ್ನಷ್ಟು ಆಸೆಪಡು. ೨. (ವ್ಯಾಪಾರದಲ್ಲಿ) ಹೆಚ್ಚುಕಡಿಮೆ ಕೇಳು; ಚೌಕಾಸಿ ಮಾಡು: ಕೊಂಡರೆ ಇಲ್ಲ, ಕೊಸರಿದರೆ ಬಂದೀತೆ (ಗಾದೆ).

[< ಕೊಸರ್. / ತಮಿ. ಕೊಶರು; ತುಳು. ಕೊಸರು, ಕುಸ್ರು; ತೆಲು. ಕೊಸರ್]

**ಕೊಸರು$_3$** (ನಾ). ೧. ಹೆಚ್ಚಾದ ಆಸೆ; ಅಧಿಕವಾದ ಬಯಕೆ: ಅಣುಮಾತ್ರಂ ಕೊಸರಿಲ್ಲದಾಳ್ದನೆಡೆಯೊಳ್ ಲಂಚಕ್ಕೊಡಂಬಟ್ಟು ಮಾರ್ಪಣಮಂ ಕೊಂಡು (ಸೋಮೇಶ. ೬೩); ಹುಸಿಯು ಹುಳುಕು ಡಂಭಕತ್ವ ಕೊಸರು ಕೋಪ ನೀಚ ಹೃದಯ (ಸುಸಾರ. ೭೪-೪). ೨. ಬಹಳ ಕಡಮೆ; ಸ್ವಲ್ಪ: ಇವುಗಳಲ್ಲಿ ನವ್ಯತೆಯೇನಾದರೂ ಇದ್ದರೆ ಅದು ಕೊಸರು ಮಾತ್ರ (ಹೊಸಕ್ಷಿ. ೨೮೧); ಕಾಸಿಗೆಂಟು ಕೊಸರಿಗೆ ಹದಿನಾರು (ಜಿಂಗೂಲಿ. ೯೯); ಕೊಸರು ಕೊಟ್ಟು ಬದುಕಿದವರಿಲ್ಲ, ಮೊಸರು ಮಾರಿ ಕೆಟ್ಟವರಿಲ್ಲ (ಗಾದೆ). ೩. ಹೆಚ್ಚಳ; ಆಧಿಕ್ಯ: ಆದ ಕೇಳಿದನು ಕಿವುಡಿಕೆಯ ಕೊಸರಿನ ಕೊನರ್ವ ಕೋಪದಲಿ (ತೊರರಾ. ೩-೭-೩೦).

[← ಅರ. ಕಸ್ರ; ಮರಾ. ಕಸರ್; ತಮಿ. ಕೊಶುಜು, ಕುಶರ್; ತುಳು. ಕೊಸರು, ಕುಸುರಿ, ಕುಸ್ರು; ತೆಲು. ಕೊಸರು]

**ಕೊಸರುಗಹಳೆ** (ನಾ). ಅತಿಶಯವಾಗಿ ಶಬ್ದಮಾಡುವ ಕಹಳೆ; ಭೋರಿಡುವ ಕಾಳೆ (?): ಹನುಮನ ಹೊಸ ಪರಿಗೆ ಪರಬಲದೊಳುಬ್ಬರಿಸಿದವು ಪಟಹಚಯ ಕೊಸರುಗಹಳೆಯ ಸಬುದ ಸದೆದೆಬ್ಬಿಸಿದವಿವರನು (ತೊರರಾ. ೬-೩೨-೧). [ಕೊಸರು$_1$ (< ಕೊಸರ್) + ಕಹಳೆ]

**ಕೊಸರುಮಾತು** (ನಾ). ಹೆಚ್ಚಿನಮಾತು; ಮಿಕ್ಕಮಾತು: ಚ್ಯುತವಿಕಲ್ಪದೊಳಾತ್ಮಕಳೆ ಹೆಚ್ಚಿ ತೋಱಿ ನಿಶ್ಚಿತ ಶುಕ್ಲ ಕೊಸರುಮಾತೇನು (ಭರಚ. ೫೪-೬೬); ಉಳಿದಯ್ಯಂದಿರೆಲ್ಲರ ಕುವರರು ನೃಪತಿಯಿದ್ದೆಡೆಗೆ ಅವರಂತೆ ದುಗುಡಸಿಂಗರದಿಂದ ಬಂದೆದ್ದರವರಂತೆ ಕೊಸರುಮಾತೇನು (ಭರಚ. ೭೯-೪೬). [ಕೊಸರು$_1$ (< ಕೊಸರ್) + ಮಾತು$_1$]

**ಕೊಸಲು** 'ಕೊಸಱು$_2$' ನೋ.

**ಕೊಸವ** (ನಾ). ಕ್ಷುದ್ರವ್ಯಕ್ತಿ; ಕೇಡಿಗ: ಆ ಭಯದಿಂದಲೇಯೇನು, ನೀನಾ ಕೊಸವನನ್ನು ಕಣ್ಣೆತ್ತಿ ನೋಡಲೂ ಒಲ್ಲದೆ, ಹೀಗೆ ಕಾಲಕ್ಷೇಪ ಮಾಡುತ್ತಿರುವುದು (ಮಂತ್ರಶ. ೨೪-೨೧). [?]

**ಕೊಸಳು** (ಕ್ರಿ). ಜಾರು; ಕುಸಿ (?): ಮಧುರಯಾತನೆಯ ಮಂಥನ ಎದೆಯಿಂದಿಳಿದು ಉದರದತ್ತ ಕೊಸಳಿ, ಕೊನರಿ ಹರಿದು (ಹೊಸಕ್ಷಿ. ೫೨).

[< ಕೊಸರ್]

**ಕೊಸಱಿಕೆ** (ನಾ). ಚೆಲುವು; ಸೊಗಸು; ಮನೋಹರತೆ: ಹೊಸಪರಿಯ ಗೀತಗಳ ಗಂಧರ್ವಸತಿಯರ ತುಂಬುರನ ವೀಣೆಯ ಕೊಸಱಿಕೆಯ ಕಳಕಳದಿ ರಂಜಿಸಿತಾ ಸಭಾಸ್ಥಾನ (ತೊರರಾ ೬-೫೫-೨೫). [ಕೊಸಱು$_1$ + -ಇಕೆ]

**ಕೊಸಱು$_1$** (ಕ್ರಿ). ಮೋಹಗೊಳಿಸು; ಮರುಳುಮಾಡು: ವಿಟನಂ ಕೂಟದೊಳ್ಕೊಸಱಿ ಬೇಟದೊಳ್ಪಳೆಯಿಸಿ (೧ರಿಳ. ೨-೧೦೫ ವ); ಬಾಳೆದೊಡೆಯ ಕೊನಬುಗಾತಿಯಳ ಕೊಸಱಿ ರಂಗಾಯೆಂಬ ವನಿತೆ ತಾ ವಶವಪ್ಪಳೆಂದೊ (ಶತಸಾಂ. ೨೨-೧೦). [?]

**ಕೊಸಱು$_2$, ಕೊಸಲು** (ನಾ). ಮೋಹ; ಮರುಳು: ಸವಿನುಡಿಯ ಸುಂದರಾಂಗಿ ಚೆಲ್ಲದ ಫುಲ್ಲೋಲ್ಲಾಸೆ ಕೊಸಱಿನ ಕುಸೆಗಾತಿ ಇಂಗಿತವನಱಿವ ಭಂಗಾರದ ಪುತ್ರಿಕೆ (ಉದ್ಭಟ ೫-೫೩ ವ); ನೆರೆ ಸೊಗಸು ಸೊಗಸಿನೊಳ್ಕಳವಳಿಕೆ ಕಳವಳದ ಬೆರಕೆಯೊಳ್ಕಸಱು ಕೊಸಱಿಗೆ ತಕ್ಕೆ ತಕ್ಕೆಯೊಳ್ಪಱಿದು ನಸುಸೋಂಕಿ ವಿಟರಿಂ ಪಣಂದೆಗೆಯೆಂದು ಮುದಿಸೂಳೆ ಮಗಳ್ಗುಸುರ್ದಳು (ನಂದಿಮಾ. ೨೩-೪೩). **ಕೊಸಲು**: ಸಲೆ ಕೊಸಲು ಮುದ್ದು ನೋಟಂ ನಲವೆನಿಸಿರೆ (ನೀತಿಸಾ. ೮೮೨). [< ಕೊಸಱು$_1$]

**ಕೊಸಱುಪುಟ್ಟಿ** (ನಾ). ಒಂದು ಊರಿನ ಹೆಸರು: ದುರ್ವಿನೀತೆಱೆ ಅಪ್ಪೊರ್ ಕೊಸಱುಪುಟ್ಟಿಱಿದಿದಿರು ಪಯ್ದುಗಿದಿಡಿದಿರುದಱಿನಾಮನ್ನಾದಿಗಳುಪಗೊಳತ್ತೆಟ್ಟಪ್ಪದಿನ್ವರು (ಮೈಆಂ. ೧೯೩೦, ೩೬-೫; ಸು. 800). [?]

**ಕೊಸಾಕುಳಿ** (ನಾ). ತೊಂದರೆ; ಪೀಡೆ: (*). [?]

**ಕೊಸಾರನೆ** (ಅ). ಕೊಸರಿಕೊಂಡು; ಒಮ್ಮೆಲೆ: ತನ್ನ ಕೈಗಳನ್ನು ಕೊಸಾರನೆ ಬಿಡಿಸಿಕೊಳ್ಳುತ್ತಾ (ಸರ್ವಮಂ. ೧೬೮). [< ಕೊಸರ್$_1$]

**ಕೊಸಿಗಕೊತ್ತ** (ನಾ). ಒಂದು ಸ್ಥಳದ ಹೆಸರು (?): ಕುಪ್ಪೆ ಒದೆಯ ಕೊಸಿಗಕೊತ್ತದಿ ಕಾವಲ ಏನಾದಿ ಪೆರುರಾದರು (ಇಆ. XIV, ೨೩೨-೫೭; 9ನೆಯ ಶತ). [?]

**ಕೊಸಿಗಗೆಱೆ** (ನಾ). ಒಂದು ಕೆರೆಯ ಹೆಸರು: ಕೊಸಿಗಗೆಱೆಯ ಬಡಗಣ ಕಡೆಗೋಡ ತೋಣ್ಣ (ಎಕ. V, ಅರಕ. ೨೪-೧೪; 900). [ಕೊಸಿಗ$_0$ + ಕೆಱೆ]

**ಕೊಸಿಗಗೊಳ** (ನಾ). ಒಂದು ಕೊಳದ ಹೆಸರು: ಕೊಸಿಗಗೊಳದ ಕೆಟಗೆರಡು ಮತ್ತಮ್ಮರ್ಕ್ಕಿಯೊಳೆರಡು ಮತ್ತರ್ (ಎಕ. VIII, ಸೊರಬ. ೭೦-೧೨; 938). [ಕೊಸಿಗ$_0$ + ಕೊಳ$_2$]

**ಕೊಸೆ$_1$** (ಕ್ರಿ). ಸಂಭೋಗಿಸು; ಮೈಥುನ ಮಾಡು; ಗೊಸೆ (ಕರಾ) "ಕೊಸೆ – ನಿಧುವನಕರಣೇ, ವಾಹಾರೋಹಭೇದೇ ಚ (ಕುದುರೆಯ ಸವಾರಿಯ ಒಂದು ರೀತಿ)" (ಶಮಧಾ).

**ಕೊಸ್ವಾಟ** = ಸಂಭೋಗ: (*). [?]

**ಕೊಸೆ$_2$** (ಕ್ರಿ). ಎಳೆದಾಡು; ಕಿತ್ತುಕೊಳ್ಳಲು ಪ್ರಯತ್ನಿಸು.

**ಕೊಸೆದಾಡು** = ಎಳೆದಾಡು; ಕಿತ್ತಾಡು: ದಾಂಪತ್ಯದ ಈ ಸವಿ ಬಲ್ಲವರು ರಜಾಪ್ರಸಂಗಗಳನ್ನು ಕೊಸೆದಾಡಿ ರಸಮಯಗೊಳಿಸಿಕೊಳ್ಳುತ್ತಾರೆ (ಗಾಳಿಪ ೫೯). [?]

**ಕೊಸೆ$_3$** (ನಾ). ೧. ಕುದುರೆ ಸವಾರಿಯಲ್ಲಿ ಒಂದು ಬಗೆ: "ಕೊಸೆ – ನಿಧುವನಕರಣೇ ವಾಹಾರೋಹಭೇದೇ ಚ (ಕುದುರೆಯ ಸವಾರಿಯ ಒಂದು ರೀತಿ)" (ಶಮಧಾ); ಹಯದೊಡಂಬಡು ವಂಚನೆ ಕೇಣಮಾಸನಂ ಕೊ[ಪಾಠಾಂ. ತೊ]ಸೆ ದೆಸೆ ದಿಟ್ಟ ಮುಟ್ಟ ಕೆಲಜಂಕೆ ನಿವರ್ತನೆ ಕಾಣ್ಕೆ (ಪಂಪಭಾ ೧೦-೭೭) ೨. ಕಡಿವಾಣ; ಲಗಾಮು: ಮುನ್ನಂ ಮೆಲ್ಪಿನೊಳಂ ಸ್ವಭಾವಮನಾರ್ಯವೆನೆಂದು ಕೊಸೆಯಂ ಬಲ್ಲಿತ್ತುವಿಡಿದು ಪಾಯ್ದೇಱಿ ಆವುಂಕೆ ಪಾಱಿ ಪರಿಯಲ್ತಗುಳ್ದೊಡೆ (ಜೀವಸಂ. ೫೪-೧); ನಿಶ್ಶಂಕೆಯಿನಂತಂಗೊಂಡು ಭೋಂಕನೆಡದ ಕೊಸೆಯಂ ತೆಗೆದು ನಿರ್ವರ್ತಿಸಲೆಂದು ನೆಗಪಿ ಮುರಿವುದುಂ (ನೇಮಿಪು. ೪-೧೦೪ ವ). 'ಕಸ್ನೆ$_2$' ಪರಾ.

[< ಸಂ. ಕುಶಾ]

**ಕೊಸೆ$_4$** (ನಾ). ೧. ಸಂಭೋಗ; ಮೈಥುನ: ಕಾಪುಂ ಮೇಪುಂ ತೋಡುಂ ಬೀಡುಂ ದೆಸೆಯುಂ ಕೊಸೆಯುಂ ಮೆಚ್ಚುಂ ಬೆಚ್ಚುಂ (ಪಂಪಭಾ. ೫-೪೩ ವ); ಮೈಮರೆದಿರುವ ದೆಸೆಯನ್ನೂ 'ಕೊಸೆ' (ರತಿ ವಿಶೇಷ)ಯನ್ನೂ ತಿಳಿದಿರತಕ್ಕುದು (ನಾಡೋಜ. ೩೧೧). ೨. ಗಂಡಸಿನ ಜನನೇಂದ್ರಿಯ: (*). [< ಕೊಸೆ$_1$]

**ಕೊಸೆಗೊಳ್** (ಕ್ರಿ). ಲಗಾಮನ್ನು ಹಿಡಿ; ಲಗಾಮನ್ನು ಎಳೆದು ಕುದುರೆಗಳನ್ನು ನಿಲ್ಲಿಸು: ಸಾರಥಿ ಕಣ್ಣಱಿದೊಯ್ಯನೆ ತೇರಂ ಕೊಸೆಗೊಂಡು ಚಕ್ರಿಯಂ ಬಿನ್ನವಿಕುಂ (ಆದಿಪು. ೧೧-೫೭).

[ಕೊಸೆ$_3$ + ಕೊಳ್$_1$]

**ಕೊಹಿಸು, ಕೋಹಿಸು** (ಕ್ರಿ). ಕೊಯ್ಯಿಸು: ಹುಸಿದೊಡೆ ಕೊಹಿಸು ಜಿಹ್ವೆಯ (ಅಂಬಿಕಾ. ೧೯-೧೪). **ಕೋಹಿಸು**: ಮೃತ್ಯು ಬರೆದ ಬೀಜಾಕ್ಷರದ ಲಿಪಿ-ಜಿಂಹೆಯ ಕೋಹಿಸದಿರಲು (ಜಿನಮು. ೨೩-೪). [< ಕೊಯಿಸು]

**ಕೊಹೆ, ಗೊಹೆ$_1$** (ಅ). ಒಂದು ಅನುಕರಣ ಶಬ್ದ; ಕೆಮ್ಮುವಾಗ ಗಂಟಲಿನಿಂದ ಹೊರಡುವ ಧ್ವನಿ. ಗೊಹೆ$_1$. 'ಗೊಹೆಗುಟ್ಟು'ಪರಾ.

**ಕೊಹೆಕೂಹೆ** (ದ್ವಿರುಕ್ತಿ): ಕೊಹೆಕೊಹೆಯೆಂದು ಗಂಟಲ ನರಬಿಗಿದು ಕೆಮ್ಮುತ್ತ (ಜೀವಂಚ. ೧೪-೧೬).

**ಕೊಳ್$_1$, ಕೊಣು, ಕೊಳು, ಕೊಳ್ಳು$_1$** (ಕ್ರಿ). ಕೊಂಡ (ಭೂತಕೃ); ಕೊಂಬ, ಕೊಳುವ, ಕೊಳ್ವ (ವರ್ತಕೃ); (ವಿಧ್ಯರ್ಥ ಏಕವಚನದಲ್ಲಿ) ಕೊ$_1$, ಕೋ$_3$. ೧. ತೆಗೆದುಕೊಳ್ಳು; ಅಂಗೀಕರಿಸು; ಪರಿಗ್ರಹಿಸು: ಕೊಳ್ ಕೊಳ್ಳೆಂದೆಚ್ಚೊಡೆ (ಪಂಪಭಾ. ೭-೩೮); ಗುರುಗಳ್ ತಾವೇನನೊಂದಂ ಬೆಸಸಿದರದನೇ ಕೊಳ್ವುದು (ಕಾದಂಪೂ. ೯೮೧); ಆಲೋಚಿಸದೊಲಿದು ಕೊಳ್ಳ ಜೈನವ್ರತಮಂ (ಸಮಪ ೧೫-೧೧೩); ಕವಚವನಾದಿಯದು ಕೊಳ್ಳೆಂದು ಕೊಟ್ಟನು ಗವಸಣಿಗೆದೆಗೆದು (ಕುವ್ಯಾದ್ರೋ. ೧೦-೪೬). ೨. ವಶಪಡಿಸಿಕೊಳ್ಳು; ಕಿತ್ತುಕೊಳ್ಳು; ಅಪಹರಿಸು: ಇವಾನ್ ಪೆಱನ್ ಓರ್ವನ್ಕೊಳ್ವೋನುಂ ಕೊಡುವೋನುಂ ಪಞ್ಚಮಹಾಪಾತಕನಕ್ಕುವರ್ (ಎಕ. VI, ಕೊಪ್ಪ. ೩೭-೧೧; 675); ಕಳ್ಳದಿರಿಂ ಪೆಱರ ವಸ್ತುವಂ ಕೊಳ್ಳದಿರಿಂ (ವಡ್ಡಾರಾ. ೧೭೦-೭); ಪರಸ್ತ್ರೀಯರಂ ಕೊಳಿಪಂ ಕೊಳ್ವನೆನಿಪ್ಪ ಪಾಪಿಯುಂ . . . ಘುಳುಮ್ಮನಿಱಿಗುಂ ಶ್ವಭ್ರಾಂತಮಂ ತಾಪಿನಂ (ಆದಿಪು. ೫-೮೧); ಶ್ರೀರಂಗಪಟ್ಟಣ ಕರ್ಣಾಟಕವೆಂಬ ನಾರಿಯ ನೊಸಲೊಳು ಮೆಱೆವ ಚಾರು ರನ್ನದ ಬೊಟ್ಟನಂತಿಹುದದ ಕೊಳೆ ನೇರವಹುದು ರಾಜಕಾರ್ಯ (ಕಂಸವಿ. ೧೧-೬೭). ೩. ಕ್ರಯಕ್ಕೆ ಪಡೆ; ಕೊಂಡುಕೊಳ್ಳು: ಮೂವತ್ತಯ್ಗಣ್ದಗಮ್ಮಣ್ಣ ಪೊೞಲಸೆಟ್ಟಿ ತನ್ನ ಮೆಚ್ಚಿದಲ್ಲಿ ಕೊಣ್ಡ (ಎಕ. III, ಮಂಡ್ಯ. ೧೫-೬; 907); ಸತ್ತುಗದ ಪುಡಿಯಂ ಪತ್ತು ಪಣವಿಂಗೆ ಮಾಱಿ ಪತ್ತಾಡಂ ಕೊಳ್ವಂ (ಪಂಚತಂ. ೧೮೬-೬); ಪರಿಪರಿಯ ಭಂಡದ ವ್ಯವಹಾರದೊಳಗೆ ಕೊಡಲಿಲ್ಲ ಕೊಳಲಿಲ್ಲ (ಅವಚಂ. ೨೧೨-೯೫೭); ಮೊಲ್ಲೆಯ ಸರವಿದೆ ಕೊಳ್ಳೆಂದು ಬೆಲೆಗೊಂಡು ನಿಲ್ಲದವನ ನಾಚಿಸಿದಳು (ಕಂಸವಿ. ೬-೮೪). ೪. ಕರೆ; ಸುರಿ: ಮೊೞಗಿದಂತೆ ಕೊಳ್ವುವೆ ಮುಱಿಗಳ್ (ಕಾವ್ಯಸಾ. ೪೩೭ ಶೂದ್ರಕ); ಜೇನಮುಱಿ ಕೊಂಡುದಮರ್ದಿನ ಸೋನೆಯೆ ಸುರಿದತ್ತು (ಆದಿಪು. ೭-೧೭); ದೇವಭಕ್ತಿಗದು ಚೋದ್ಯಮೆ ಕೊಳ್ಳವೆ ಪುಷ್ಪವೃಷ್ಟಿಗಳ್ (ಅಜಿಪು. ೧-೬೧); ತರುವಲಿಯ ತಲೆಯ ಕಿರೀಟಮುನಾಲಿಕಲ್ಲ ಮುಱಿ ಕೊಂಡುದೆಂಬಂತೆ (ಧರ್ಮಾಮೃ. ೧-೧೫೮). ೫. ತಾಗು; ಮುಟ್ಟು; ಬಡಿ: ಬೆಳಗಪ್ಪ ಜಾವದಯ್ಕಿಲ್ ಕೊಳೆ ಶೀತಕ್ಕಾಜದಳ್ಕಿ (ಕಾವ್ಯಸಾ. ೬೯೪ ಶೂದ್ರಕ); ಬಂದ ಮಾವಿನ ಪೊಸ ಪೂವಿನೊಳ್ ಪೊರೆದ ಪೊಣ್ಮಿದ ಕಂಪು ಮೊಗಂಗಳಂ ಚಳಿಲ್ಲನೆ ಕೊಳೆ (ಪಂಪಭಾ. ೫-೩೪); ಪೋೞಲ ಪಾವಡೆಱ [ಸಿ]ಡಿಲ್ ಬೀಱಿ ಮರಂ ಮುಱಿಯೆ ಗಾಳಿ ಕೊಳೆ (ಶಾಂತಿಪು. ೯-೧೦೬). ೬. ಕಚ್ಚು; ಕಡಿ; ಚುಚ್ಚು; ಇರಿ: ಇರುಳೊಳೆ ಪಾವು ಕೊಳೆ ಸತ್ತು (ವಡ್ಡಾರಾ. ೧೦-೮); ನಿಶಾತ ಶರಾಳಿಗಳೆಯ್ದೆ ಚಕ್ಕುಚಕ್ಕನೆ ಕೊಳೆ ಮೊಕ್ಕುಮೊಕ್ಕನೆ ಶಿರಂಗಳುರುಳ್ದುವು ವೈರಿಭೂಪರಾ (ಪಂಪಭಾ. ೧೨-೧೧೯); ತತ್ಕಿರಾತನ ಕರಮಂ ಕೋಪಡೊಳಹಿ ಕೊಂಡುದು ತರುಚಾಪದಿನಂತಕನ ಕಣೆಯೆ ಕೊಂಡವೊಲೆನಸುಂ (ಅರ್ಧನೇ. ೩-೮೧). ೭. ಪ್ರಯೋಜನವಾಗು; ಸಾರ್ಥಕವಾಗು; ಕೆಲಸಕ್ಕೆ ಬರು: ಜಿನರಂ ಪೂಜಿಸದಮರೇಂದ್ರನ ಸುಖಮುಂ . . . ಆವನಾದೊಡಂ ಬಯಿಸಿ ಮಱುಗಿದೊಡೆ ಕೊಂಡಪುದೇ (ಧರ್ಮಾಮೃ. ೬-೧೪೬); ಸಾಮುದ ಸರಸ ಕೊಳ್ಳದು ಬಿಲ್ಲ ಹಿಡಿ ಹಿಡಿ (ಕುವ್ಯಾದ್ರೋ. ೧-೬೧); ನಿನ್ನಗಡುತನವನು ಬಲ್ಲೆನದು ಕೊಳ್ಳದು ಕಣಾ (ತೊರರಾ. ೧-೯-೩೦); ಮಂದರಗಿರಿಯ ನೆತ್ತುವಡೆ ನುಗ್ಗೆಯ ದೊಣ್ಣೆಯಿಂದೆ ಮೀಂಟಿದಡೇಳುವುದೆ ಎಂದಳಲ್ದಳು ಮುನ್ನಾಮಯ ಕೊಳ್ಳದು ಗೋವಿಂದನ ಪುರವ ನಿಟ್ಟಿಸುತೆ (ಮೋಹತ. ೨೯-೩೪). ೮. ಲೆಕ್ಕಿಸು; ಗಣಿಸು; ಲಕ್ಷ್ಯಮಾಡು: ವೈರಿ ಸುಭಟರ ಕೋಲ ಕೊಂಬುದೇ ವೀರ ಕುಂಜರ (ಕುವ್ಯಾದ್ರೋ. ೩-೨೭). ೯. ಮೆಚ್ಚು; ಗೌರವಿಸು. ೧೦. ಗಳಿಸು; ಸಂಪಾದಿಸು; ಆರ್ಜಿಸು: ನಿಜಪ್ರಾಣೇಶ್ವರನುಂ ತಾನುಂ ಕುಡುಕಂ ಕೊಳಲಡವಿಗೆ ಪೋಪುದುಂ (ಪಂಚತಂ. ೧೬೦-೪); ಮುಕುತಿಯ ಕೊಂಡನಸುರೇಂದ್ರ (ಕೌಶಿರಾ. ೩೬-೭೪). ೧೧. ಒಪ್ಪಿಕೊಳ್ಳು; ಅನುಮತಿಸು; ಮೆಚ್ಚು. 'ಕೈಗೊಳ್' ಪರಾ. ೧೨. ಅಮರು; ಮುತ್ತು; ಆವರಿಸು: ಆದಟಿನೆ ಕೊಂಡಪುದುರಿಬನಮಂ (ಪಂಪಭಾ. ೫-೮೮); ಉರಿ ಕೊಳೆ ಕೋಱ್ಮಗಂ ಕೊಳೆ ವಿಷಾಹಿಕುಳಂ ಕೊಳೆ (ಗದಾಯು. ೨-೪೩). **ಕೊಣು:** ೧. ಉಡಲು ಉಣಲುಂಟು ಕೊಡಲು ಕೊಣಲುಂಟು ಅಡಗಾಣಿಪ ಭವಗಡಲಾಯಾಸವನು ಬಿಡದೆ ದಾಟಲಿವುಂಟು (ಶೀರ್ಷಮ. ೧೧೦-೨). **ಕೊಳು:** ೩. ಸದರವಾಗಿಹ ಬೆಲೆಗೆ ಕೊಳಬಪ್ಪುದು ಧರೆಯೊಳಾ ಧೇನುವನು (ತಿಮ್ಮಅ. ೬-೩೮). ೬. ಕುಳಿಕಂ ವಾಸುಗಿ ತಕ್ಷಕ ನಿಳೆಯೊಳ್ ಕರ್ಕೋಟ ಪದ್ಮಮಾ ಪದ್ಮಕನುಂ ಸಲೆ ಶಂಖಪಾಳನೆಂಬಿವು ಕೊಳುಗುಂ ರವಿವಾರಮಾದಿಯಾಗಿರೆ ಕ್ರಮದಿಂ (ಖಮುದ. ೩-೩೦). ೧೩. [ಗಣಿತ] ಭಾಗಿಸು; ಭಾಗಾಹಾರ ಮಾಡು: "ತವಿಸು ಭಾಗಿಸು ಉಗಿ ಎತ್ತು ಕೊಡು ಕೊಳು . . . ಇಂತಿನಿತುಂ ಭಾಗಂಗೊಂಬುಡಕ್ಕೆ ಪೆಸರು" (ವ್ಯವಹಾ. ೧೨). ೧೪. ದೂರವಾಗು; ಪರಿಹಾರವಾಗು: ಪಾವನಮೆನಿಸುವ ನಿರ್ವಾಣದೇವನ ನೆನೆದಂದುಯಖಿಳ ದುರಿತ ಸಮೂಹಂ ಕೇವಳಮೆ ಕೊಳುಗುಂ (ಸೌಇಇ. IX-i, ೨೩೫-೩೦; 1141). **ಕೊಳ್ಳು$_1$:** ೧. ನಳಿನರಿಪುವುದಯಿಸಲಿ ಬೆಳುದಿಂಗಳಲಿ ಕೈದುವ ಕೊಳ್ಳಿ (ಕುವ್ಯಾಕ. ೧೭-೬); ಅಲ್ಲೇ ನ್ಯಾಯ ಅಲ್ಲೇ ಕಂಡೀತು ಕೊಳ್ಳೀ ಮಲ್ಲಿ ಕೊಂಕುಳ ಕೂಸ (ಗಾದೆ). ೩. ಕಲ್ಲುಸಕ್ಕರೆ ಕೊಳ್ಳಿರೋ ನೀವೆಲ್ಲರು (ಪುರಂದ. ೧-೧೨೬ ಪಲ್ಲವಿ).

**ಕೊಂಡಾಟ** = ೧. ಹೊಗಳಿಕೆ; ಸ್ತುತಿ; ಮೆಚ್ಚಿಗೆ: ಭಕ್ತಿಯಿಲ್ಲದ ಕೊಂಡಾಟಮುಂ ಶಕ್ತಿಯಿಲ್ಲದ ಸೆಣಸುಂ (ಧರ್ಮಾಮೃ. ೧-೭೫); ಮಲೆವರ ಹಿಂಡಿನ ಗಂಡನೆಂದೆಂಬ ಕೊಂಡಾಟಕೊಪ್ಪುವನೊಬ್ಬನೀ ಧರೆಗೆಮ್ಮ ಗಂಡನಲ್ಲದೆ ಪೆರರುಂಟೆ (ಭರಚ. ೬-೯೪); ಮೊದಲು ಮುದ್ದಣನಿಗೆ ಮೇರೆಯಿಲ್ಲದ ಕೊಂಡಾಟವು ದೊರೆಯಿತು ಆಮೇಲೆ ಆದರೊಡನೆ ಹೋರಾಟವೂ ನಡೆಯಿತು (ತವನಿ. ೧೮೨). ೨. ಮುದ್ದಾಟ; ಪ್ರೀತಿ; ಅಚ್ಚೆ: ಪಂಡಿತೆಯೆಂಬ ನೆಗೞ್ತೆಯ ಕೊಂಡಾಟದ ವಾದಿ ತನ್ನ ನೋದಿಸುತ್ತಿರೆ (ಆದಿಪು. ೩-೨೧); ಇನ್ನೂ ಸಣ್ಣ ಮಗು ಸಿಗಲಿಲ್ಲ ಕೊಂಡಾಟಕ್ಕೆ ಅಲ್ಲವೆ (ವಾತ್ಸಲ್ಯ. ೨೪೧); ಅಮ್ಮ ಹೋದ ಮೇಲೆ ಇವಳದು ಹೆಚ್ಚಾಗಿದೆ ಕೊಂಡಾಟ (ಕಪ್ಪುಹು. ೧೮). **ಕೊಂಡಾಡಿಸು** = ಹೊಗಳಿಸು; ಹೊಗಳುವಂತೆ ಮಾಡು: ರೂಢಿಸಲು ನಿಜಕೀರ್ತಿಯಂ ಕೊಂಡಾಡಿಸಲು ಭೂಪ್ರಜೆಗಳಿಂ (ಬಸಪು. ೩೬-೪೩); ಜೈನಮತವನು ಕೊಂಡಾಡಿಸಿದ ಪಂಡಿತಯೋಗಿಯ ಪಾದಪುಂಡರೀಕಕೆ ನಮಿಸುವೆನು (ಅಂಜಚ. ೧-೪೭); ಆರಾರ ಕೊಂಡಾಡಿಸ ಬಂದೆ ತಂದೆ (ಮೋಹತ. ೩೭-೧೭); ಜಸವೆಣ್ಣನಿಂದ ಕೈನೀಡಿ ಕೊಂಡಾಡಿಪವೊಲ್ ಪೊಸ ನೆಲೆವಾಡವೊಪ್ಪಿದುವು (ಕಂಸವಿ. ೬-೯೫). **ಕೊಂಡಾಡು** = ೧. ಹೊಗಳು; ಸ್ತುತಿಸು: "ಕೊಂಡಾಡು (ಕೊಂಡು + ಆಡು)–ಆತ್ಮಾದರೇ (ಹೊಗಳು)" (ಶಮಧಾ); ಭೀಮಸೇನನವೋಲ್ ಪೂಣ್ದುದನೆಯ್ದೆ ಪೂಣ್ದ ಪಗೆಯಂ ಕೊಂಡಾಡದಂ ಗಂಡನೇ (ಪಂಪಭಾ. ೧೨-೧೬೦); ನಿನ್ನನೊಲಿದು ಕೊಂಡಾಡಿದರೆ ಇಱುಹೆ ರುದ್ರನಾಗದೆ ಪೇಳಯ್ಯ (ಮಹಾದೇ. ೧೫-೮); ಮಹಾಸತೀ ಜಯಮನಾರ್ ಕೊಂಡಾಡರಾರ್ ಮನ್ನಿಸರ್ (ಪುಷ್ಪಪು. ೧೩-೯); ಈಕೆಯ ಕೊಂಡಾಡುವೊಡೊಂದು ನಾಲಗೆ ಸಾಕೆನಿಸದು ಸತ್ಕವಿಗೆ (ಮೋಹತ. ೨೩-೫೨)

೨. ಲಾಲಿಸು; ಮುದ್ದಿಸು ; ಪ್ರೀತಿಸು : ಕರಿತುರಗಬಲಂಗಳ್ ಪೆರ್ಚುರ್ವಂತು ಮಲೆಯುಂ ಮಂಡಲಮುಂ ಬೆರ್ಚುರ್ವಂತು ಕೊಂಡಾಡುವ ನಾಲ್ವರು ಮನುಜರೊಳಗೆ ನೆಗೞ್ದರಿಗನ ತೇಜಮೆ ತೊಳಗಿ ಬೆಳಗೆ (ಪಂಪಭಾ. ೪-೧೦); ಕೊಂಡಾಡುಗೆ ಮುಂಡಾಡುಗೆ ಮುದ್ದಿಸುಗೆ ಮರಲ್ದಪ್ಪುಗೆ ಕೈಕೊಂಡೀ ಕಾವ್ಯಮಂ (ಗಿರಿಕ. ೧-೧೦) ; ಗಿರಿಶನರ್ಧಾಂಗಿ ಕೊಂಡಾಡಿದೆನ್ನಂ ನಿರಾಕರಿಸಿ ಕೞುಗಾಯಲಟ್ಟಿದರೆಂದು ಮುನಿದೆಯೊ (ಸಿದ್ಧರಾ. ೨-೪೯). ೩. ವ್ಯವಹರಿಸು ; ಕರೆ : ಗಂಗೆಯಂ ಭಗೀರಥ ತಂದನೆಂಬುದು ಲೋಕಪ್ರಸಿದ್ಧಿಯಾಗಿ ಭಾಗೀರಥಿಯೆಂದು ಕೊಂಡಾಡಿದರ್ (ಚಾವುಂಪು. ೪-೨೫); ಅಂದಿಂದಿತ್ತ ಕಾಳಾಷ್ಟಮಿಯೆಂದು ಲೋಕಮುಮದನೆ ಕೊಂಡಾಡಿದರ್ (ಚಾವುಂಪು. ೩೨-೧೭). ೪. ಪ್ರಕಟಿಸು ; ತೋರು ; ವ್ಯಕ್ತಪಡಿಸು : ಯುಧಿಷ್ಠಿರಂ ತಲೆಗನಿಯ[ಪಾಠಾಂ ವ]ನಲ್ಲದೆಯುಮೇವದೊಳ್ ತಲೆಗವಿದು ಸಿಗ್ಗಂ ಕೊಂಡಾಡಿ ನೆತ್ತಮನಾಡಿ (ಪಂಪಭಾ. ೭-೨ವ) ; ಕುಹಕತೆಯಂ ಕೊಂಡಾಡುವನಿಂದ್ರಜಾಲಿಕಂ ತಾನಕ್ಕುಂ (ವಸ್ತುಕೋ. ೬೬-೮೬). ೫. ಪ್ರೋತ್ಸಾಹಿಸು; ಹುರಿದುಂಬಿಸು (?): ಖೇಡತನವನು ಬಿಡಿಸಿ ಸಲೆ ಕೊಂಡಾಡಿ ಕಾದಿದನಸುರಜಾತಿಯೊಳೋಡೆ ಪರಿಭವ ತನ್ನದೆಂಬ ಪದಸ್ತತನದಿಂದ (ಕುವ್ಯಾದ್ರೋ. ೧೫-೬೨) ; ತಿರುಗಿ ಕಂಡನು ಭೀಮನೆಲೆ ತರುವಲಿಗಳಿರ ಕೊಂಡಾಡಿ ಕಾದುವ ದೊರೆಗಳೇ ನಕುಲಾಂಕ ತೆಗೆ ಸಹದೇವ ಸಾರೆನುತ (ಕುವ್ಯಾಕ. ೧೦-೩೫). ಕೊಂಡಾಡುಹಣ = ಹೊಗಳಲ್ಪಡುವುದು : ಭಕ್ತನಾದ ಬಸವನಿಂ ಒಡೆಯನಾದ ಅಲ್ಲಮಂ ಕೊಂಡಾಡುಹಣ (ಕಾಶಕ್ಯ. ೩೦೧). ಕೊಂಡುಕೊನರ್ = ಮೇಲೆತ್ತಿ ಹೊಗಳು ; ಮೆಚ್ಚು : ಪ್ರೀತಿಬಂದರೆ ಕೊಂಡುಕೊನರದೆ ಕವಿಕುಲ ಜಾತಿಗೀತಿಯನೀಕ್ಷಿಸುವುದೆ (ಕುರಾಸಾಂ. ೧-೯೬). ಕೊಂಡುಕೊನೆ = ಕೊಂಡುಕೊನರ್ : ಧರಾಮರರೀ ಬ್ರಾಹ್ಮಣರೆಂದು ಕೊಂಡುಕೊನೆದು (ಆದಿಪು. ೧೫-೨೧) ; ಲೋಕಮೆಲ್ಲಱ್ಗಡೆಗೊಣ್ಡುಗೊಣ್ಡುಕೊನೆದಪ್ಪುದು ಸಾಹಸಮೇನನೂನಮೋ (ಎಕ. V, ಬೇಲೂರು. ೧೨೩-೩೯ ; 952) ; ಮತಿಹೀನರಪ್ಪ ಮನುಜರ್ ಪತಂಗವೃತ್ತಿಯನೆ ಕೊಂಡುಕೊನೆಯುತ್ತಿರ್ಪರ್ (ಪಂಚತಂ. ೨೧೭-೨) ; ಗಂಡಗಾಡಿಗೆ ಪುರುಷೋತ್ತಮನೆಂದು ಕೊಂಡುಕೊನೆದುದು ಲೋಕಂ (ಪಂರಾಮಾ. ೩-೧೫೬). ಕೊಂಡುಕೊಳು = ಬೆಲೆಕೊಟ್ಟು ಪಡೆದುಕೊಳ್ಳು; ಕ್ರಯಮಾಡು : ಕೊಂಡುಕೊಳಲೂ ಹಣಕೆ ಹವಣದಲ್ಲ (ಅನಿಕೇ.೨-೧೬). ಕೊಂಡುಪೋಗು, ಕೊಂಡುಹೋಗು = ತೆಗೆದುಕೊಂಡು ಹೋಗು ; ಎತ್ತಿಕೊಂಡು ಹೋಗು ; ಕರೆದೊಯ್ಯು : ಇವನನಿರುಳೊಳೆ ಸಂಸ್ಕರಿಸಲ್ವೇೞ್ಕುಮೆಂದು ಕೊಂಡುಪೋಪಾಗಳ್ (ಪಂಪಭಾ. ೮-೭೯ವ) ; ಕುರುಕುಲಕುಟುಂಬನಘಟಚೇಟಿಯಂ ಕೊಂಡುಪೋಪಂತೆ ಮಗುೞ್ಚಿ ಕೊಂಡುಪೋಗಿ (ಗದಾಯು. ೯-೧೬ ವ) ; ಭಕ್ತರ ವೇಷದಿಂ ಕಳ್ಳರ್ ಬಂದು ಕೀಲಾರಮಂ ಕೊಂಡು ಹೋದರಿಂದು (ಬಸರ. ೯-೧೦೭) ; ಈ ಮಿಸುಪ ಹೊಮ್ಮಣ್ಣನಾದೊಡೆ. . .ನೀಂ ಕೊಂಡುಹೋಗೈ ಎನಲು (ಬಸಪು.೨೩-೩೯); ಕೊಂಡುಹೋಗಾ ವಿಬುಧರಿಪುಗಜಗಂಡಪಂಚಾನನನ (ತೊರರಾ. ೧-೯-೩) ; ಶ್ರೀಪುರಂದರವಿಠಲನ ಎತ್ತಲಾದರು ಕೊಂಡುಹೋಗೆಲೊ ಜೋಗಿ (ಪುರಂದ. ೩-೧೯-೩). ಕೊಂಡುಬರ್ = ಎತ್ತಿಕೊಂಡು ಬರು ; ಕರೆದುಕೊಂಡು ಬರು : ಎಲ್ಲಿವೊಕ್ಕೊಡಂ ಕೊಂಡುಬಂದಪನೆಂದು ಬಗೆಯದಿದಿರಂ ನೋಡುತ್ತಿರಿಮೆಂದು (ಪಂಪಭಾ. ೭-೩೭ ವ) ; ಎನ್ನನೀ ಮುನಿಗಳ್ ಕೊಂಡುಬಂದರ್ (ಪಂಚತಂ. ೧೨೧-೧೧) ; ಹಾರೆಯಂ ನೀಂ ಕೊಂಡುಬಾರಾ (ಬಸಪು. ೨೩-೩೪). ಕೊಂಡುಯ್ = ಕೊಂಡುಪೋಗು : ಬಂಡಣದೊಳೆನ್ನನೋಡಿಸಿ ಕೊಂಡುಯ್ದಂ ನಿನ್ನನಾಸರಿತ್ಸುತಂ (ಪಂಪಭಾ. ೧-೭೬) ; ಘನಮಪ್ಪಾಸರೆ ಮೇಲೀ ಮುನಿಯಂ ಕೊಂಡುಯ್ದು ನೆಟ್ಟನಪ್ಪಳಿಸುವೆನೋ (ಧರ್ಮಾಮೃ. ೮-೧೧೭) ; ಸುದತಿ ನಿನ್ನಯ ಚಿತ್ರಪಟವ ಕೊಂಡುಯ್ದು ತೋಜಿದ ಮುನ್ನಮರುಳ್ಗೊಂಬನವನು (ಮೋಹತ. ೩೧-೧೦). ℙ ಕರ್ತೃರ್ವಿನ ಸ್ವಪ್ರಯೋಜನಕ್ಕಾಗಿ ಕ್ರಿಯೆ ನಡೆದುದನ್ನು ಸೂಚಿಸುವಲ್ಲಿ ಈ ಧಾತು ಮತ್ತೊಂದು ಧಾತುವಿನ ಭೂತಕೃದಂತದ ಮುಂದೆ ಸೇರುತ್ತದೆ. ಉದಾ: ಕುಳಿತುಕೊಳ್, ತಂದುಕೊಳ್, ಮಲಗಿಕೊಳ್, ಮಾಡಿಕೊಳ್ ಇತ್ಯಾದಿ. ಅನೇಕ ಶಬ್ದಗಳ ಮುಂದೆ ಸೇರಿ ಸಂಯುಕ್ತ ಧಾತುವಾಗಿ ಬೇರೆ ಬೇರೆ ಅರ್ಥಗಳನ್ನು ಕೊಡುತ್ತವೆ. ಉದಾ: ಕೈಕೊಳ್, ಕೊರಲ್ಗೊಳ್ ಇತ್ಯಾದಿ.

[ದೇ. ‖ ತಮಿ. ಮಲ. ಕೊಳ್, ಕೊಳ್ಳು ; ತುಳು. ತೆಲು. ಕೊಸು]

**ಕೊಳ್$_2$, ಖೊಳ್, ಗೊಳ್** (ಅ). ಒಂದು ಅನುಕರಣ ಶಬ್ದ: ಅಂಬುಧಿಯುಳ್ಳೋಳಂ ನೆಗೞ್ಚಿ ಕವಿದು ನರ್ತಿಸಿ ನಡೆದತ್ತಳ್ಳಾಡೆ ನೆಲಂ ಬಲಮುದು ಕೊಳ್ಳೆಂದು ಮಹಾರವಂ ಪೊದೞ್ದಿ ಸವಿನೆಗಂ (ಆದಿಪು. ೧೩-೫೩). ಖೊಳ್ : ಹೀಗೆ ಗೇಲಿಯ ಮಾಡಿ ಖೊಳ್ಳೆಂದು ನಕ್ಕು ಓಡಿಹೋಗುವರು (ಕನ್ನಜಾ. ೪೦). ಗೊಳ್ : ನೆಲದಿನಣಮೆ ತಳರದೆ ಬಿಲ್ ನಿಲ್ವೊಡೆ ಗುಡುಗುಡುಗುಡುಗೊಳ್ಳೆಂದೊಡಸಾರೆ ಸುಯೋಧನಂ ಕರಂ ಸಿಗ್ಗಾದಂ (ಪಂಪಭಾ. ೩-೫೯) ; ನಾರೀವೃಂದ ಕೈಗಳ ಹೊಯ್ದು ಮಿಗೆ ಗೊಳ್ಳೆಂದು ನಕ್ಕುದು (ಕುವ್ಯಾಸ. ೧೨-೩೭).

**ಕೊಳ$_1$** (ನಾ). ನಾಲ್ಕು ಬಳ್ಳಗಳ ಒಂದು ಅಳತೆ; ಕೊಳಗ: ಮರಂಗಲ್ಗೊಳ್ ಪನ್ನಿರ್ಕೊಳಗಟ್ಟಿ ಸಲ್ಗು (ಎಕ. X (S), ೯೩-೮ ; 10ನೆಯ ಶತ). 'ಅಯ್ಗೊಳ' ಪರಾ. [< ಕೊಳಗ$_1$]

**ಕೊಳ$_2$, ಕೊಣ** (ನಾ). ೧. ಸರೋವರ; ಕೆರೆ; ಪುಷ್ಕರಿಣಿ: "ಕಾಸಾರಃ, ಸರಸೀ, ಸರಃ – ಈ ೩ ಕೊಳನು" (ಹಲಾಯು. ೧೧೧-೫೩) ; ಕೊಳದೊಳಗೇನಂ ನೋೞ್ಪಿಗ ವಿಳಾಸಿನೀ ನಿನ್ನ ಪೋಲದೇನತಿಶಯಮೋ (ಕವಿರಾ. ೧-೮೮) ; ಕೊಳದ ತಡಿವಿಡಿದು ಬೆಳೆದೆಳದಳಿರ್ಗಳಶೋಕೆಗಳಲತೆಯ ಮನೆಗಳೊಳ್ (ಪಂಪಭಾ. ೫-೪) ; ಕೊಳನಲ್ಲದೆ ಕಿಱುವಳ್ಳಕ್ಕೆಳಸುವುದೆ ಹಂಸೆ (ಮಹಾದೇ. ೧೯-೬) ; ಪೂವಿಲ್ಲದ ಕೊಳನಿಲ್ಲ ಫಲಾವಳಿಯಿಲ್ಲದ ಮರಂಗಳಿಲ್ಲಾ ನಾಡೊಳ್ (ಗಿರಿಕ. ೨-೪) ; ಕೆಂದಾವರೆಯಿದೆ ಕೊಳನಿಲ್ಲ (ಕಂನವಿ. ೯-೯೨). ಕೊಣ : ೧. ಕೊಣನುಮಂ ಮುತ್ತಿ ಮೂದಲಿಸಿದಂ (ತುರಂಗ. ೭೪-೪). ೨. ಸ್ನಾನದ ತೊಟ್ಟಿ ; ಸ್ನಾನಘಟ್ಟ : ತಾನು ಹುಡುಗಿಯಾಗಿದ್ದಾಗ ಬಚ್ಚಲುಕಲ್ಲಿನ ಮೇಲೆ ಜಾರಿ ಬಿದ್ದು ಕೊಣದ ಕಲ್ಲು ಗಲ್ಲಕ್ಕೆ ತಗಲಿ ನೆತ್ತರು ಸೋರಿ (ಮಲೆಮ. ೬೪೮).

[ದೇ. ‖ ತಮಿ. ಮಲ. ತುಳು. ಕುಳ ; ತೆಲು. ಕೊಲ]

**ಕೊಳ$_3$** (ನಾ). ಗೊತ್ತಾದ ಸ್ಥಳ; ಸಂಕೇತ ಸ್ಥಾನ: "ಕೊಳಂ = ಸಂಕೇತ ಸ್ಥಳಂ" (ಶಮದ. ಪರಿ. ೨) ; "ಕೊಂಬು" (ಚತುನಿ. ಕಿ. I, ೬೮). [?]

**ಕೊಳಂಗಟ್ಟು** (ಕ್ರಿ). ಮಡುಗಟ್ಟು ; ದಟ್ಟೈಸು ; ಸಂದಣಿಸು : ಒಂದೆಡೆಯೊಳ್ ವಜ್ರವೈಡೂರ್ಯ ಶಿಲಾಪಟ್ಟಕಂಗಳ ದೀಧಿತಿಯೆ ಕೊಳಂಗಟ್ಟಿ ತುಳುಂಕಾಡುವಂತೆ ತಿಳಿದೊಪ್ಪುವ ಸರೋವರದ ತಡಿಗಳೊಳ್ (ಜಗವಿ. ೧೬-೩೪ ವ). [ಕೊಳ$_2$ + ಕಟ್ಟು$_1$]

**ಕೊಳಂಗೊಳ್, ಕೊಳಗೊಳ್** (ಕ್ರಿ). ೧. ಮಡುಗಟ್ಟಿ ನಿಲ್ಲು ; ಸಂದಣಿಸು : ಕದಪಿನೊಳ್ ಪೊಂಪುೞಿಯಾಗಿಯುಂ ಭ್ರೂವಿಭ್ರಮದೊಳ್ ಪೊನಲ್ವರಿದುಂ ಅರುಣಾಧರದೊಳ್ ಕೊಳಂಗೊಂಡುಂ . . . ನಾಟ್ಯರಸಮೆ ತೀವಿ ತುಳುಂಕುಗುಟ್ಟೆ (ಆದಿಪು. ೭-೧೨೫ ವ). ಕೊಳಗೊಳ್ : ೧. ನೆತ್ತರುಚ್ಚಳಿಸಿ ರಥಂಗಳೊಳ್ ಕೊಳಗೊಳುತ್ತಿರೆ ಕಾದಿದರೊರ್ವರೊರ್ವರೊಳ್ (ಪಂಪಭಾ. ೧೨-೭೬) ; ಎಲರಲೆಯೆ ತಾಗಿ ಪಱಿದುಗುವ ರಸಾಸಾರಮೆ ಕೊಳಗೊಂಡು (ಸೂಕ್ತಿಸು. ೪-೪೯).

**ಕೊೞ್** (ಗು). ಕೊಳೆತು ಅಜಗಜಿಯಾಗಿರುವ; ಅಸಹ್ಯವಾದ; ಕೊಚ್ಚೆಯಾದ. 'ಕೊೞ್ಕಿಣ', 'ಕೊೞ್ಮೃದುಳ್' ಪರಾ. [?]

**ಕೊೞಕ, ಕೊಳಕ** (ನಾ). ೧. ಕೊಳೆಯುಳ್ಳವನು; ಹೊಲಸಾದವನು; ಹೇಸಿಗೆಯಾದವನು: ಬೆಳುಕಂ, ತೊಳಕಂ, ಕೊೞಕಂ (ಶಮದ. ೨೦೫ ಪ್ರಯೋ). ೨. ಮಂಡಲದ ಹಾವಿನಲ್ಲಿ ಒಂದು ಜಾತಿ; ಕೊಳಕುಮಂಡಲದ ಹಾವು: ನವಣೆಯ ಪಿಟ್ಟಂ ಕೊಂಡೊಡನೆ ತೊೞಿಸಿ ತಿನಲತಿಮುಂಡಿತಮುದು ಕೊೞಕನುಗ್ರವಿಷಮಂ ಕಳಿಗುಂ (ಖಮುದ ೧೦-೬೩). **ಕೊಳಕ**: ೧. ಅವರು ಸೋಮಾರಿ, ಹೇಡಿ, ಕೊಳಕ, ಕೈಲಿ ಹರಿಯದವರು ಎಂಬುದು ನೋಡಿದ ಕೂಡಲೆ ಗೊತ್ತಾಗುತ್ತಿದ್ದಿತು (ಬೈಸರ್ವೆ. ೨೧); ಅವನು ಕೊಳಕ ಅವನ ಮೇಲಿನ ಗಾಳಿ ಬೀಸಬಾರದೆಂಬ ಭಾವನೆಯೂ ಅನೇಕರಿಗಿದೆ (ಹುಟ್ಟಿಹ. ೧೫೬). [ಕೊೞಕು + -ಅ₇]

**ಕೊೞಕು, ಕೊಳಕು** (ನಾ). ೧. ಕೊಳೆತುದು; ಹೊಲಸು; ಹೇಸಿಗೆ. 'ಕೊೞಕ' ಪರಾ. **ಕೊಳಕು**: ೧. ಕಳೆದ ಬಟ್ಟೆ ತೊಳೆದಂತೆ ಹರಿದು ಹೋಗುವುದು ಮಲೆತ ಕೊಳಕು (ಅರಳು. ೩೯೧); ಇಂದಿನ ಕಳಸಾಪುರವೆಂದರೆ ಕೊಳಕಿನ ಕೊಂಪೆ (ಕಳಹು. ೧೦೩). (ಗು). ೨. ಕೊಳೆಯಾದ; ಹೊಲಸಾದ: ನೀನು ಹೀಗೆ ಕೊಳಕು ಜನರ ಜೊತೆಯಲ್ಲಿ ಬೆರೆಯುವುದು ನನ್ನ ಮನಸ್ಸಿಗೆ ಏನೂ ಸರಿಬರುವುದಿಲ್ಲ (ತೇನೋಡ. ೩೨). [< ಕೊೞೆ₁ + -ಕು ?]

**ಕೊೞಚೆ, ಕೊಳಚೆ** (ನಾ). = ಕೊಳಕು: ತೃಷಾವಿಷಾದಮಂ ಕೊೞಚೆಯ ನೀರೊಳೇ ಕಳೆವರೆಂದೊಡೆ (ಚಿಕವಿ. ೧-೩೬). **ಕೊಳಚೆ**: ಕೊಳಚೆಯ ನೀರಿನಲ್ಲಿ ಗುಂಪನಜಸುವಿರಿ ಮರುಳೆ (ಬಸವ. ೫೬೪); ಜೊಂಡೆದ್ದ ರಕ್ತದ ಸಾಲುಗೊಳಚೆಯ ಕರುಳ ಕುಸುರಿಯ ಬಸಿವ ನೆಣವಸೆಯ (ಕುವ್ಯಾಭೀ. ೧೦-೧೧); ಸ್ವರ್ನದಿಯಂ ಪೊರ್ದಿರ್ಪವಂ ಕಿಲ್ಗೊಳಚೆಯ ಕೊಳೆಸೀರ್ಗೊಲ್ವನೇ (ಪಾಪ್ರಾಶ. ೨೯); ಹೊಂಡದ ಕೊಳಚೆಯ ನೀರನು ಕುಡಿದರು ಕಪ್ಪೆಗವೆಷ್ಟು ಠೇಂಕಾರ (ಇಂಚಾಪ. ೨೧೨-೫೦). [< ಕೊೞೆ₂]

**ಕೊೞಲ್, ಕೊಳಲ್, ಕೊಳಲು** (ನಾ). ಬಿದಿರ ಕೊಳವೆಯಿಂದ ಮಾಡಿದ ಊದುವ ವಾದ್ಯ; ವೇಣು: "ಕೊೞಲ್ – ವೇಣುವಾದ್ಯ. (ಕೊೞಲೆಂಬ ಕ್ರಿಯೆಯೊಳ್ ಕುಳಂ)" (ಶಮದ. ಪರಿ ೨); ಎಕ್ಕಮದ್ದಳೆಯ ಕೊೞಲ ಝುಂಕಾರದ ಪಜ್ಜೆಗಳ್ ಮುಂದೆ ಬಾಜಿಸುತ್ತಂ (ವಡ್ಡಾರಾ. ೮೦-೧೨); ದಂಟನೂದುವಂಗೆ ಕೊೞಲ್ ದೊರೆಕೊಂಡುದೆಂಬಂತೆ (ಧರ್ಮಾಮೃ. ೧೦-೨೮೦); ಮುರಹರನ ಕೊೞಲ ಸನ್ನೆಯ ವರರವಕನುಸರವಿದೆಂಬಿನಂ (ಜಗವಿ. ೪-೧೧೫); ಕರಡೆಯ ಮದ್ದಳೆಯ ಕೊೞಲ ಪಳವದ . . . ಕಿನ್ನರದ ಸರಮೆ ಸರವಾ ಪೊೞಲೊಳ್ (ಸೂಕ್ತಿಸು. ೪-೧೦೪). **ಕೊಳಲ್**: ತ್ರಿಭಂಗಿಯಿಂದಂ ನಿಂದು ಒಪ್ಪುತಿರ್ಪೊಂದು ಪೊಸ ಕೊಳಲಂ ಕೊಳುತ್ತಂದು . . . ಅಧರದೊಳ್ತಂದಿರಿಸಿದಂ ಕೊಳಲನೊಪ್ಪದಿಂ (ಅನಾರ. ೧೮೧-೧೪). **ಕೊಳಲು**: ಸನೆಯದೂದುವ ಕೊಳಲು ಮೈಯ ತವರದ ತೊಡಿಗೆ ಎಸೆವುತಿರೆ (ಬಸರ. ೯-೧೦೨); ಕೊಳಲನೂದುತ್ತಾ ಬಂದ ನಮ್ಮ ಗೋಪಿಯ ಕಂದ ಕೊಳಲನೂದುವುದು ಬಲು ಚೆಂದ (ಪುರಂದ ೧-೧೩೩-೧); ಕೊಳಲಿಗೆ ಪಶು ಮಿಗ ಘಂಟೆಗೆ ಹಸುಳೆ ಜೋಗುಳೆಗೆ ಸರ್ಪ ಸುನಾಗಸರಕೆ (ಭರಜ. ೧-೮೮); ಕೊಂಬು ಕೊಳಲು ನಾಗಸರ ಭೇರಿ ತಂಬಟಜೊಂಬುಳಿ ಬುರುಗು ಡಿಂಡಿಮದ (ಕಂನವಿ. ೮-೧೯); ಎಳೆಯ ಮಾವಿನ ಮರದ ಕೆಳಗೆ ಕೊಳಲನೂದುತ ಗೊಲ್ಲಗೌಡನು (ಗೋಹಾಡು. ೩೧); ಕೊಳಲೂದಿದ ತುಟಿಗಳಲ್ಲಿ ಪಾಂಚಜನ್ಯ ಪುಟಿಯಿತು (ನೆಲಮು. ೪೦).
[ದೇ. ‖ ತಮಿ. ಮಲ. ತುಳು. ಕುೞಲ್; ತೆಲು. ಕ್ರೋವಿ]

**ಕೊೞವಿ, ಕೊಳಬೆ, ಕೊಳವಿ, ಕೊಳವೆ, ಕೊಳಾಯಿ, ಕೊೞವೆ** (ನಾ). ೧. ಬಿದಿರು ಮೊದಲಾದುವುಗಳ ಪೊಳ್ಳಾದ ಉದ್ದನೆಯ ನಾಳ, —ನಳಿಕೆ: "ಧಮನಿಯೆನೆ ಕೊೞವಿ" (ಮಂಗರಾ. ೬೧-೨೦); ಕೊೞವಿ, ಉೞುಗು, ಬೆೞಗು, ಮೊೞಗು (ಶಬ್ದಾನು. ೧೪೦ ವ್ಯಾಖ್ಯಾ). **ಕೊಳಬೆ**: ೧. ಇದನ್ನು ಮರದ ಕೊಳಬೆಯಲ್ಲಿ ಇಟ್ಟಿದ್ದಾರೆ (ಚೀನಬಾ. ೧೫). **ಕೊಳವಿ**: ೧. ಇದೌಪಾಸನದ ಕೊಳವಿಯೊ (ಕುವ್ಯಾಅ. ೧೫-೧೬); ಅಬ್ಧಿ ಧಿಂಕಿಟ್ಟು ಗಗನಕೆದ್ದುದು ಕೊಳವಿಯೊಳೂದೆ ಬೆಂಕಿ ನಾಲಗೆ ನೀಡುವಂತೆ (ಭರಜ. ೨೪-೩೫); ಕುಂದಣದ ಕೊಳವಿಗಳಂ ಕರಗಳಿಂ ಪಿಡಿದು (ಸೌಗಂಧಿ. ೧೩೧-೧೮). ೨. ಒಂದು ಅಳತೆಯ ಪ್ರಮಾಣ; ಚಟಾಕು: ದರವು ಮಾತ್ರ ರೂಪಾಯಿಗೆ ಐದು ಕೊಳವಿ (ಚಟಾಕು) (ಪ್ರಣಸ. ೬). **ಕೊಳವೆ**: ೧. ಬಿದಿರೊಳಗೆ ಬೆಣ್ಣದಡವಿ ಬಳಿಕದಜ ಮೇಲದಂ ಮೆತ್ತಿ ಮೆಲ್ಲನೆ ತೆಗೆದು ಕೊಳವೆಯಂದದಿ ಮಾಡಿ ಅಲ್ಲಿ ಸಕ್ಕರೆಯಿಕ್ಕಿ (ಸೂಪಶಾ. ೧-೩೬); ಕುಂಕುಮ ರಸದುಂಬಿ ಕೈಯಂಡೆಯ ಕೊಳವೆಯ ಚಿಗಿದು (ಮೋಹತ. ೧೪-೬೫). 'ಕೊಳವೆ ಬಾವಿ' ಪರಾ. **ಕೊಳಾಯಿ**: ೩. ನೀರಿನ ನಲ್ಲಿ; ನಳ (ಉಕ): ಸರೋಜ ನೀರಿಗಾಗಿ ಕೊಳಾಯಿ ಬದಿಗೆ ಹೋದ ಸಂದು ನೋಡಿ (ಪತಿ. ೧೪); ನೀರಿನ ಕೊಳಾಯಿಗಳನ್ನು ಕಟ್ಟಿ ನೀರಿನ ಸೌಕರ್ಯ ಒದಗಿಸಿದ್ದಾರೆ (ದಲ್ಲಿಪ ೧೦೬). **ಕೊೞವೆ**: ೧. (*).
[ದೇ. ‖ ತಮಿ. ಕುೞೈ. ಕುೞಾಯ್; ಮಲ. ಕುೞ; ತುಳು. ಕೊಳವೆ, ಕೊಲವೆ, ಕೊಳಾಯಿ; ತೆಲು. ಕೋಲು, ಕ್ರೋಲು]

**ಕೊೞವಿಮೀಂಟೆ** (ನಾ). ಕೊಳವೆಯ ಮೂಲಕ ಕಲ್ಲು ಹರಳನ್ನು ಹಾರಿಸುವ ಒಂದು ಸಾಧನ: ಮಜ್ಜಿಗುಬ್ಬಿಯಂ ಕೊೞವಿಮೀಂಟೆಗಳಿಂದಿಟ್ಟು ಕೆಡಪಲ್ (ಚಿಕವಂ. ೮-೨೦). [ಕೊೞವಿ + ಮೀಂಟೆ]

**ಕೊೞವೆ** 'ಕೊೞವಿ' ನೋ.

**ಕೊೞಿಗಾಲ** (ನಾ). ಒಂದು ಊರಿನ ಹೆಸರು: ಬಿಟ್ಟೊೞ ರಾಝುಯ್ಯ ಕೊೞಿಗಾಲ ಗಂಗಯ (ಎಕ. IV, ಹೆಗ್ಗಡ. ೧೦೪-೧೫; 1037). [?]

**ಕೊೞಿಂಗೆಱೆ** (ನಾ). ಒಂದು ಬಗೆಯ ತೆರಿಗೆ (?): ಕಾಣಿಕೆಯುಂ ಕೊೞಿಂಜೆಱೆಯುಮಿಂನ್ನಿನಿತುಮಂ (ಸೌಇಎ. ೧೯೩೮, ೩೨೬-೪೯; 1075). [?]

**ಕೊೞೂರ್** (ನಾ). ಒಂದು ಊರಿನ ಹೆಸರು: ಜನ್ಮಕ್ಷೇತ್ರಂ ಕೊೞು(ೞೂ)ರ್ ನ್ನಾಮ ಗ್ರಾಮಂ (ಇಆ. XVIII, ೩೬೬-೪; 8ನೆಯ ಶತ). [? + ಊರ್]

**ಕೊೞೆ₁, ಕೊಳೆ₁** (ಕ್ರಿ). ೧. ಕೆಟ್ಟು ನಾರು; ಹೊಲಸಾಗು; ಕೊಳಕಾಗು: "ಕೊೞೆ – ಜೀರ್ಣೇ, ಕಾಯಮಲೇ ಚ" (ಶಮಧಾ); ಕೊೞೆ [ಪಾಠಾಂ. ಳ]ದ ಪುಲ್ಲದರ್ಕಂ ತೊೞೆವಂತನಿತುಮಂ ತೊೞೆದು (ವಡ್ಡಾರಾ. ೪೬-೧೨); ಎನಿತೊಳವು ಕೊೞೆವ ಪಡುಕೆಗಳನಿತಱ ದುರ್ಗಂಧಮುವರ ಮೆಯ್ಯ . . . ನಾತಮಂ (ಶಾಂತಿಪು. ೬-೧೧೦); ಪಿರಿಯ ಸಿರಿಯಂ ಜಿನಾಗಮ ಪರಿಣತಮತಿ ಕೊೞೆ [ಪಾಠಾಂ. ಳ]ದ ಪುಲ್ಲದಕ್ಕಂ ಬಗೆವಂತಿರೆ ಬಗೆದು (ಅಜಿಪು. ೨-೧೧೩); ಎಣ್ಣೆ ಮುಟ್ಟಿದ ಕುಂಬಳಕಾಯಂತೆ ಒಳಗೊಳಗೆ ಕೊೞೆತು (ಧರ್ಮಾಮೃ. ೩-೩೫). **ಕೊಳೆ₁**: ೧. ಕೊಳೆತ ಬೆರಳನು ಭುಕ್ತಶೇಷದೊಳುಳುಹಿದೊಡೆ ಕಂಡೀಕೆ ಚಿತ್ತದೊಳಳುಕದುಪಭೋಗಿಸೆ (ಸಂಧಪ. ೩೩-೨೨); ಒಕ್ಕಲಿಲ್ಲದ ಊರು ಕೊಳೆತು ನಾರುವ ನೀರು (ಕನಕ. ೫೦-೩); ಕುಂಬಳಕಾಯಂತೆ ಮನದೊಳು ಕೊಳೆವುತ ಡಂಬಕರಿಹರದು ವ್ರತವೆ (ಭರಜ. ೧೬-೧೪); ಹಳಸದು ಕೊಳೆಯದು ಹುಳಿಗಟ್ಟಿಕೊಳ್ಳದು . . . ಅಮಳ ಸುಭಾಷಿತ ರಸವು (ಇಂಚಾಪ. ೨೨೨-೧೦೦).

೨. (ಆಲಂ) ಪ್ರಗತಿಯಿಲ್ಲದೆ ಇದ್ದ ಸ್ಥಾನದಲ್ಲಿಯೇ ಇರು; ಕೊಳೆ ಬೀಳು: ಜನನಾಯಕನಾದ ಮೋಹನನು ಸೆರೆಮನೆಯಲ್ಲಿ ಕೊಳೆಯುತ್ತಿರುವುದನ್ನು ಜನರು ಸಹಿಸುವಂತಿರಲಿಲ್ಲ (ಪಂಜಪಂ. ೨೧೯); ಅಂಥವರು ಅದೇ ತರಗತಿಯಲ್ಲಿ ಕೊಳೆಯುವುದು ಉಚಿತವಲ್ಲ (ಶಿಕ್ಷದ. ೯೮).

[ದೇ. ‖ ತಮಿ. ಕುೞೈ; ಮಲ. ಕುೞಯು, ಕುೞಮ್ಪು; ತುಳು. ಕುರೆ, ಕುಱ; ತೆಲು. ಕ್ರುಳ್ಳು]

**ಕೊೞೆ$_2$, ಕೊಳೆ$_2$** (ನಾ). ೧. ಕೊಳೆತುದು; ಹೊಲಸು: "ಕೊೞೆ = ಜೀರ್ಣೇ, ಕಾಯಮಲೇ ಚ" (ಶಮಧಾ); ಕೊೞೆಯುಂ ಬಿಣ್ಪುಂ ಲೋಳೆಯುಮುಳವಲ್ಲದ ವಜ್ರಲೇಪದಂತಿರೆ (ಧರ್ಮಾಮೃ. ೪-೧೬೬); ತನುಸೌಖ್ಯಮುಕ್ಕುಮುಕ್ಕುಮೆಂದೆನಿತೆನಿತಂ ತೊಳೆದೊಡಮದಕ್ಕೆ ಕೊೞೆ ಸಹಜಂ (ಸಮುಪ. ೬-೩೦); ತೊವಲ ಕೊೞೆಯುಂ ಪುೞುಗಳುಂ ಸುರಿಯೆ (ಜೀವಸಂ. ೪೩-೧೧). (ಗು). ೨. ಕೀಳಾದ; ಅಧಮವಾದ. 'ಕೊೞೆಗಬ್ಬ', 'ಕೊೞೆದೆಯ್ವ' ಪರಾ. **ಕೊಳೆ$_2$**: ೧. ಬಿಲದಿ ಮುಳುಗಲು ಕೊಳೆಯ ಕಾಯದ ಮಲವು ಪೋಗುವುದಾಗಲೇ (ಗಗತಾ. ೯-೪೫). ೩. ಕೆಸರು; ರಾಡಿ; ಕೊಚ್ಚೆ: ಅತಿವೃಷ್ಟಿಯಾಗೆ ಕೆಯ್ಮೊಲು ನೆರೆಯ ಪಾಲೊ ಅಥವಾ ಕೊಳೆಯ ಪಾಲೊ ತಾನಾಗುವುದು ನಿಶ್ಚಯಂ (ಹಬ್ಬೆರ. ೨೪-೧೦); ಎಮ್ಮೆ ಕೋಣಗಳಾಟ ಕೊಳೆಯಲ್ಲಿ ಕುಂಟೆಯೊಳ್ (ಕಾಲೂರ ೧೨೧-೨೫೩).

**ಕೊಳೆಹಾಕು** = ಪ್ರಗತಿಯಿಲ್ಲದೆ ಇದ್ದಲ್ಲಿಯೇ ಇರಿಸು: ಅವನನ್ನು ಅದೇ ಕೆಲಸದಲ್ಲಿ ಕೊಳೆಹಾಕಿದ್ದಾರೆ (ರೂಢಿ). [< ಕೊೞೆ$_1$]

**ಕೊೞೆಗಂಪು** (ನಾ). ಕೊಳೆತದ ನಾತ; ಹೊಲಸು ವಾಸನೆ; ದುರ್ಗಂಧ: ಕೊೞೆತೊಸರುತಿರ್ದಾ ಮೆಯ್ಯನ್ ಎಲ್ಲ ಬತ್ತಲೆಗೆಯ್ದು, ನಮಗದಱ ಕೊೞೆಗಂಪು ಬಡಿವುದನ್ ತಪ್ಪಿಸಿಕೊಳಲ್ . . . ಮೇಡ ಕೋಡಿನ ಮೇಲೆ ಕುಳ್ಳಿರ್ದಪರ್ (ಅಂತಿಗೊ. ೧೯-೩೯೮). [ಕೊೞೆ$_2$+ ಕಂಪು]

**ಕೊೞೆಗಣ್, ಕೊಳೆಗಣ್ಣು** (ನಾ). ಕೊಳೆ ತುಂಬಿದ ಕಣ್ಣು; ಹೊಲಸು ಕಣ್ಣು: ಕೊೞೆಗಣ್ಣುಂ ಬಿಟ್ಟಬಾಯುಂ ಕೂಡಿದಪುರ್ಬುಂ (ಧರ್ಮಾಮೃ. ೭-೨೨೫). **ಕೊಳೆಗಣ್ಣು**: ನೀರುಗಣ್ಣು, ಜಾರುಗಣ್ಣು, ಕೊಳೆಗಣ್ಣು, ಹುಳುಗಣ್ಣು (ಶುಕಸ. ೩೨೮). [ಕೊೞೆ$_2$ + ಕಣ್]

**ಕೊೞೆಗಬ್ಬ** (ನಾ). ಕೀಳು ತರಗತಿಯ ಕಬ್ಬ; ದೋಷಯುಕ್ತವಾದ ಕಾವ್ಯ: ನಿರರ್ಥಮಪ್ಪ ಕೊೞೆಗಬ್ಬಮನುಬ್ಬರಮಾೞ್ಪ ಗರ್ವದಿಂದೆಸೆವನ ನಿಕ್ಕು ಕಿಚ್ಚಿನೊಳಗಿಕ್ಕಿದೊಡಾಗರೆ ಮತ್ತೆ ಕಬ್ಬಿಗರ್ (ಸೂಕ್ತಿಸು. ೧-೭೪). [ಕೊೞೆ$_2$ + ಕಬ್ಬ$_1$]

**ಕೊೞೆಗಬ್ಬಿಗ** (ನಾ). ಕೀಳು ಕಾವ್ಯಗಳನ್ನು ರಚಿಸುವವನು; ಕೆಟ್ಟಕವಿ: ಮಹಾಕವೀಂದ್ರ ಮಾಧವನೆಣೆಯಪ್ಪೆನೆಂಬ ಕೊೞೆಗಬ್ಬಿಗ ನಿನ್ನಯ ಗರ್ವಮೆಂತುಟೋ (ಧರ್ಮನಾ. ೧-೬೬). [ಕೊೞೆಗಬ್ಬ+ -ಇಗ]

**ಕೊೞೆಗೊಳ್** (ಕ್ರಿ). ಕೊಳೆಯಾಗು; ನಾಸು; ಹೊಲಸಾಗು: ಕುಸುಮಘಟಾನ್ವಿತೆ ಕೊೞೆಗೊಂಡ ಸೀರೆಯಂ ಪೊದೆದು ವಸ್ತ್ರಮಂ ಧನಮನಪೇಕ್ಷಿಸಿ ಗುರುಕುಲಕ್ಕೆ . . . ಪೋಪಳ್ (ಜಾತತಿ. ೧೯-೧೬). [ಕೊೞೆ$_2$ + ಕೊಳ್$_1$]

**ಕೊೞೆದುಪ್ಪ** (ನಾ). ಕೆಟ್ಟತುಪ್ಪ; ಹೊಲಸು ನಾರುವ ತುಪ್ಪ: ಕುದಿಸಿ ಕೊೞೆದುಪ್ಪಮಂ ಕುದಿದ ದುಗ್ಧದೊಳ್ ಬೆಣ್ಣೆಗೊಂಡು ಕಾಸಿದೊಡಂ ಮೇಣ್ ಸದಗುಪ್ಪೆ ಬೆರೆದದಂ ಕಾಸಿದೊಡಂ ಕತ್ತುರಿಯ ಗಂಧಮಂ ಗೆಲಲಕ್ಕುಂ (ಲೋಕೋಪ. ೮-೪೦). [ಕೊೞೆ$_2$ + ತುಪ್ಪ]

**ಕೊೞೆದೆಯ್ವ** (ನಾ). ಕೀಳಾದ ದೈವ; ಹೀನದೇವತೆ: ಮಾರಿಗೆ ಮಸಣಿಗೆಯನಿಪ್ಪ ಕೊೞೆದೆಯ್ವಂಗಳ್ (ಸಮುಪ. ೯-೧೨೬). [ಕೊೞೆ$_2$ + ದೆಯ್ವ]

**ಕೊೞೆನಾಱು, ಕೊಳೆನಾಱು** (ಕ್ರಿ). ಕೊಳೆತು ಕೆಟ್ಟ ವಾಸನೆ ಬರು; ಗಬ್ಬುನಾರು: ಅಗುರ್ವಿನ ಕೊೞೆನಾರ್ಪ ಕೋೞ್ಕೆಸಱ ಬಾವಿಯೊಳ್ (ಆದಿಪು. ೨-೪೩); ಜಲಧಿಯೊಳು ಕಪ್ಪೆ ಸತ್ತೊಡೆ ಜಲಧಿಯ ನೀರೆಲ್ಲಮುಟ್ಟೆ ಕೊೞೆನಾರ್ಪುದೆ (ಧರ್ಮಾಮೃ. ೫-೨೪೦); ಇಂದಿನಿರುಳೊಳ್ ಮೂವರ್ಮಂತ್ರಿಗಳ್ ತನ್ನಂ ಕೊೞೆನಾಱುವ ಕೆಸಱುಳ್ಳ ಬಾವಿಯೊಳ್ ಮುೞುಗಿಸಿ (ಪೂರ್ವಪು. ೧೮); ಕಟ್ಟಿದ ಪಲ್ಗಳಿಟ್ಟೆಡೆಯ ಕೀಣಗಳಿಂ ಕೊೞೆನಾರ್ವ ಬಾಯ್ (ಸೂಕ್ತಿಸು. ೮-೩೮೪). **ಕೊಳೆನಾಱು**: ಪುಳಿತುದು . . . ಪಲವು ದೆವಸಮಿರ್ದುದು ಕೊಳೆ ನಾರ್ವುದು ರುಚಿಯಲ್ಲದ ಪಿಂಡಂ ಕುದಿರೆಗೆ ತಾಂ ಪೊಲ್ಲದೆನಿಪ ಕವಳಮನಿಪ್ಪಂ (ಅಶ್ವಶಾ. ೭-೮೧). [ಕೊೞೆ$_3$ + ನಾಱು$_1$]

**ಕೊೞೆನೀರ್, ಕೊಳೆನೀರ್** (ನಾ). ಕೊಳೆತ ನೀರು; ಮಲೆತ ನೀರು; ಹೊಲಸಾದ ನೀರು: ಹೊಲೆಯಂ ಮೊದಲಾಗಿ . . . ಕುಡಿಯಂ ಕುಲಹೀನನಾಗಿಯುಂ ತೊಗಲ ಕೊೞೆನೀರನೆಂದೊಡಕ್ಕುಮೆ ಕುಡಿಯಲ್ (ಸಮುಪ. ೬-೧೯). **ಕೊಳೆನೀರ್**: ಸ್ವರ್ಣದಿಯಂ ಪೊರ್ದಿರ್ಪವಂ ಕಿಳ್ತೊಗಳಚೆಯ ಕೊಳೆನೀರ್ಗೊಲ್ವನೇ (ಪಾಪ್ರಾಶ. ೨೯). [ಕೊೞೆ$_2$ + ನೀರ್$_1$]

**ಕೊೞೆನೆತ್ತರ್** (ನಾ). ಹೊಲಸಾದ ನೆತ್ತರು; ಕೆಟ್ಟ ರಕ್ತ: ಹಡಿಕೆಯ ತಾಣಮೆಂಬ್ದು ಕೊೞೆನೆತ್ತರ ಕೀವಿನ ಭಾಜನಂ (ಬಾಧಪು. ೫-೩೦). [ಕೊೞೆ$_3$ + ನೆತ್ತರ್]

**ಕೊೞೆಯಮ್ಮ** (ನಾ). ಒಬ್ಬಾತನ ಹೆಸರು: ಕೊೞೆಯಮ್ಮನ ಅಳಿಯಂ ಚಪ್ಪಯ್ಯನ ಮಗಂ ಪುನ್ನಿ ಗೋಸಾಸಿ ಕೆಱೆಯಮ್ಮಾಡಿಸಿ (ಎಕ. VIII, ಸೊರಬ. ೧೦೦-೬; 986 ?). [ಕೊೞೆ ? + ಅಮ್ಮ$_1$]

**ಕೊೞೆವಾವು** (ನಾ). ಕೊಳಕುಮಂಡಲದ ಹಾವು: ವಸು ಜ್ವ(ಜ)ರಯಿ(ಗಿ)ಸಿದೊಡೆ ಹೊಲೆಯರ ಮಸಣದ ಬೂದಿಯನೆ ಪೂಸುಗಲ್ಲದೊಡುದ್ಧೂಳಿಸು ತಡೆಯದೆ ಕೊೞೆವಾವಿನ ಭಸಿತಮನನಿತಱೊಳೆ ತಜ್ಜ್ವರಂ ಪ್ರಶಮಿಸುಗುಂ (ಲೋಕೋಪ. ೯-೨೦೬); ಜಳಮತಿಗೆ ಧರ್ಮಮಂ ನಿರ್ಮಳಮಪ್ಪಂತಾಗಿ ತಿಳಿಪುತಿರ್ದೊಡಮೆಂತುಂ ತಿಳಿಯದನಂತುಟೆ ತಿಳಿಗುಮೆ ಕೊೞೆವಾವಿಂಗೆನಿತನೋದೆಯುಂ ಗಾರುಡಮಂ (ಸಮುಪ. ೧೩-೭೩); ಕೊೞೆವಾವು ಗಾರುಡಮಂ ಕೇಳದಂತೆ ಕೇಳದಿರೆ ಬೇಸತ್ತು (ಧರ್ಮಾಮೃ. ೨-೧೦೨); ಮುತ್ತಮುಲ್ಲಿ ಕೊೞೆವಾವಾಗಿ ಪುಟ್ಟಿದೊಡೆ (ಬಂಹರಿ. ೧೩-೩೩ ವ); ಕೊೞೆವಾವಿನ ತೂರ್ಯನ ವಿಷಮುೞಿಗುಂ ಗೋರಟಿಯ ಮೂಲಮಂ ಪೂಸಲೊಡಂ (ಖಮುದ. ೧೦-೬೮). [ಕೊೞೆ$_2$ + ಪಾವು$_1$]

**ಕೊೞೆಸಕ್ಕದ** (ನಾ). ಬಹಳ ಹಳೆಯ ಸಂಸ್ಕೃತ; ಪ್ರಚಲಿತವಲ್ಲದ ಸಂಸ್ಕೃತ: ಪೞಗನ್ನಡಂ ಪುದುಂಗೊಳೆ ಕೊೞೆಸಕ್ಕದಮಂ ತಗುಳ್ಚಿ ಜಾಣ್ ಕಿಡೆ ಮುತ್ತಂ ಮೆಱಸಂ ಕೋದಂತಿರೆ ಪೇೞ್ವೞಿಗವಿಗಳ ಕವಿತೆ ಬುಧರನೆರ್ದೆ ಗೊಳಿಸುಗುಮೇ (ಕಾವ್ಯಾವ. ೫೫). [ಕೊೞೆ$_2$ + ಸಕ್ಕದ]

**ಕೊೞೆಸುಸಿಲ್** (ನಾ). ಕೆಟ್ಟ ಸುರತ; ಹೀನವಾದ ರತಿ: ನೀಚ ಶಬರ ಚೇಟೀಚೇಟ ಪರಮ ದರಿದ್ರಾದಿಗಳ್ ನೆಗೞ್ದ ಕೊೞೆಸುಸಿಲೆಲ್ಲಂ ರಸಾಭಾಸಂಗಳೆಂದಱಿವುದು (ರಸರ. ೪-೨೫೯ ವ). [ಕೊೞೆ$_2$ + ಸುಸಿಲ್]

**ಕೊೞ್ಗೆಸಱ್$_1$** 'ಕೋೞ್ಗೆಸಱ್$_1$' ನೋ.

**ಕೊೞ್ಗೆಸಱ್$_2$, ಕೊಗ್ಗೆಸರು, ಕೊಗ್ಗೆಸಱ್, ಕೊಗ್ಗೆಸಱು, ಕೊಳ್ಗೆಸಱ್, ಕೋಳ್ಕೆಸಱ್, ಕೋಳ್ಗೆಸಱ್, ಕೋೞ್ಕೆಸಱ್$_2$, ಕೋೞ್ಗೆಸಱ್$_2$** (ನಾ). ಮಂದವಾದ ಕೆಸರು; ಅಜಿಗಿಜಿಯಾದ ಕೆಸರು. ಬಗ್ಗಡ: ಅಮರ್ದಿನ ಕೊೞ್ಗೆಸಱಾೞ ಸರೋವರಂ (ಉದ್ಭಟ. ೯-೮೪).

**ಕೊಗ್ಗಸರು :** ಹುಬ್ಬುಗಳು ಗಂಟಿಕ್ಕಿ ಕೊಯ್ದಾಡಿದರು ಸಮರದ ಲೀವುದ್ಧಿ ಕೊಗ್ಗಸರಾಗಿ ರುಧಿರದ ಹಬ್ಬವಾಗಲು (ಮೂಲರಾ. ೩-೪೯); ಸಾರ ಪರಿಮಳವಿರಲ್ಕೊಗ್ಗಸರ ಪ್ಯೆಗೆ ಲೇಪಿಸಿ ಕೊಂಬ (ಪಶಿಲ. ೧೬-೨೩). **ಕೊಗ್ಗಸೞ್ :** ಪೌರುಷದೇವನ ಲಲನೆಯುಪಾಪದ ಕೊಗ್ಗಸೞೊಳ್ [ಪಾಠಾಂ. ಕಗ್ಗಸರೊಳ್] ಪಂಕಜದಂತಿರೆ ಪುಟ್ಟಿದಳೊಲವಿಂ (ಆದರ. ೧೪೬-೧). **ಕೊಗ್ಗಸೞು :** ನಡೆವುತ್ತ ಕೊಗ್ಗಸೞಲ್ಲಿ ಕಾಲ್ಗಳು ಜಾಱಿ ನಡನಡುಗಿ (ಬಸವು. ೧೦-೬); ಕೊಗ್ಗಸೞು ಕಡಿಖಂಡ ಮಾಂಸದ ನೆಗ್ಗಿದೆಲುಗಳ ಶಸ್ತ್ರನಿಕರ (ನಭಾಗ. ೧೦-೫೬-೨೪). **ಕೊಳ್ಗಸೞ್:** ಬಂಡೆಂಬ ಕೊಳ್ಗಸೞೊಳಗೆ ಸಿಲ್ಕಿ ಜಿನುಗುವ ಮಱಿಗೆ ಸೌರಭ್ಯರಸದ ಕುಟುಕಿತ್ತು ಬಾಣಂತಿದುಂಬಿ ಮೆಱೆದವು (ಪಚಕಾ. ೩-೪೧); ಸಂಸಾರವೆಂದೆಂಬ ಕೊಳ್ಗಸೞ ತೊಳೆದವರು (ಸಿದ್ಧೇಪು. ೨೨-೧೦). **ಕೋಳ್ಕೆಸೞ್ :** ಕೋಳ್ಕೆಸರ್ಮುಡುವಂ ಪಾಲ್ಗಡಲೆಂದು ಕಂಡರಕಟ (ರಕ್ಷಾಶ. ೬೯) **ಕೋಳ್ಗೆಸೞ್:** ಮಿದುಳ ಕೋಳ್ಗಸೞ ಹೊನಲಿಡುವ ರಕುತದ (ಹಚಕಾ. ೧೨-೩೪), ಪಟ್ಟದಾನೆಗಳು ಕಣ್ಗೆಸೆದುವು ಮುದದಿಂದ ಪುಟ್ಟಿಸುತಲ್ಲಿ ಕೋಳ್ಗೆಸೞ(ಕುರಾಸಾಂ. ೪-೭೧); ಜೊಂದೆಳ್ದ ಕಾಳ್ಮಿದುಳ ಕೋಳ್ಗಸೞಿಂದ (ರಾಜಶೇ. ೫-೧೨೦ ವ). **ಕೋಱ್ಕೆಸೞ್₂ :** ಆಗುರ್ವಿನ ಕೊಱೆನಾರ್ಪ ಕೋಱ್ಕೆಸೞ ಬಾವಿಯೊಳರ್ದೆ (ಆದಿಪು ೨-೪೩). ಮಿದುಳ ಕೋಱ್ಕೆಸರೊಳ್ ಪೊಕ್ಕು ಪೊಕ್ಕು (ಗದಾಯು. ೬-೨೮ ವ). **ಕೋಱ್ಗೆಸೞ್₂:** ಕುಳಿರ್ವಿಂದುವೆಂಬ ತಿಳಿಗೊಳದೊಳಗೊಯ್ಯನೆ ಚಂದ್ರಿಕಾಂಬುವಂ ಕುಡಿಯಲ್ಕೆಂದೊಳವೊಕ್ಕವುರ್ದಿನ ಕೋಱ್ಗೆಸೞೊಳಟ್ಟುದೆನಿಸಿತ್ತು ಸಿಭೃತ ಚರಣಂ ಹರಿಣಾ (ಕಾದಂಪೂ. ೨೮೬). [ಕೊಱ್ + ಕೆಸಱ್]

**ಕೊಱ್ತಿಲೆ** 'ಕೊತ್ತೞಿ' ನೋ.

**ಕೊಱ್ತಿಲೆಪಳ್ಳಿ (ನಾ).** ಒಂದು ಹಳ್ಳಿಯ ಹೆಸರು : ಅನ್ತ ಬನ್ದು ಕೊಱ್ತಿಲೆ ಪಳ್ಳಿದ ಆಲ ಕಿೞುಕೆಯು ಕರ್ಗಲ್ಲ ಒಳ್ಳೆಯ (ಪ್ಯೆಅರಿ. ೧೯೧೯, ೧೦-೭; 900). [ಕೊಱ್ತಿಲೆ? + ಪಳ್ಳಿ]

**ಕೊಱ್ತೞಿ** 'ಕೊತ್ತೞಿ' ನೋ.

**ಕೊಱ್ತೊಬ (ನಾ).** ಒಬ್ಬ ಪ್ರಭುತನ ಹೆಸರು : ಕೊಱ್ತೊ[ಬ]ನ ಪೊಲ[ಮನ] ಕಾದುವವೆಮನ್ದು ಪರಿಚ್ಛೇದಿಸಿ ನಡವಾಗಲ್ದ ಬಟ್ಟಗೆಱೆನೆಱೆಮ್ಮ ಕಲಿಗಳ್ಪ ನೆಂಬೋ (ಸೌಇಇ. XI-i, ೨೧-೬ ; 893). [?]

**ಕೊಱ್ನೆಣ (ನಾ).** ಅಜಿಗಿಜಿಯಾದ ಕೊಬ್ಬು, —ನೆಣ : ಬಿಸಿಲ ಬೆಣ್ಣೆಯಂತೆ ಕರಗಿ ಕಱಂಪು ನಾಱುವ ಕೊಱ್ನೆಣನುಮಗುರ್ವಂ ಪಡೆಯೆ (ಶಾಂತಿಪು. ೭-೯೫ ವ). [ಕೊಱ್ + ನೆಣ]

**ಕೊಱ್ಪುಯ್ಯಲ್ (ನಾ).** ತುರುಗಾಳಗ (?) : ದೋರಬ್ಬೆಯ ಮಗಂ ಮಲ್ಲುಗಂ ಕೊಱ್ಪುಯ್ಯಲ್ಪರಿದು ತುಱುವುಂ ಕೆಱೆಯುಮನಿಕ್ಕಿಸಿ ಕಾದಿ ಸತ್ತಂ (ಎಕ. XII, ತಿಪಟೂ. ೫೫-೨; 889). [< ಕೋೞ್ + ಪುಯ್ಯಲ್]

**ಕೊಱ್ಪೋಕ (ನಾ).** ಒಂದು ವಂಶದ ಹೆಸರು (?) : ಕೊಱ್ಪೋಕರ ಗ[ರಿ]×ಯ್ಯನ ಲಿಖಿತಂ (ಸೌಇಇ. XI-i, ೨೪-೧೮ ; 897). [?]

**ಕೊಱ್ಮಿದುಳ್, ಕೊಳ್ಮಿದುಳ್, ಕೊಳ್ಮಿದುಳು, ಕೋಱ್ಮಿದುಳ್ (ನಾ).** ಅಜಿಗಿಜಿಯಾದ ಮಿದುಳು ; ಜಜ್ಜಿದ ಮಿದುಳು : ಕೋಡ ಕೊಱೆಯೊಳಲ್ಲುಗುತರೆ ಕೊ[ಪಾಠಾಂ. ಕೋ]ಱ್ಮಿದುಳ್ವೆರಸಿ ಮಸ್ತಕಪಿಂಡದ ಮೌಕ್ತಿಕೋತ್ಕರಂ (ಪಂರಾಮಾ. ೧೩-೪೪); ನೆತ್ತಿಯಿಂ ಕೊಱ್ಮಿದುಳ್ ಸೂಸೆ (ಜಗವಿ. ೯-೮೩). **ಕೊಳ್ಮಿದುಳ್ :** ವೈರಿಮನ್ನೆಯರ ಕೊಳ್ಮಿದುಳಿಂ ಪೊಸಗಣ್ಣದಿಕ್ಕೆಯಿಂ (ಎಕ. VIII, ಸೊರಬ. ೧೩೮-೩೯ ; ಸು. 1145). **ಕೊಳ್ಮಿದುಳು.** ಪೊಱಪೊಣ್ಮುವ ಕೊಳ್ಮಿದುಳು ಪೂದಳ್ತಾಸುರಮಾಗೆ (ಎಕ. VIII, ಸಾಗರ ೧೫ ೪೭ ; 1218). **ಕೋಱ್ಮಿದುಳ್ :** ಕೋಱ್ಮಿದುಳುಂ ಬರ್ಕೆಯು ಕೊಳೆಯುಂ ಸೂಸಿದುವು (ಪಂರಾಮಾ. ೧೧-೨೦; ಪೆಣದ ಬೆಣಂಬೆ ಕೋಱ್ಮಿದುಳ ಕೋಱ್ಕೆಸೞ್ವಿನ ಪರ್ವತಂ (ಜಗವಿ. ೭-೮೪); ಮುತ್ತುಗಳ್ವೆರಸು ಸೂಸುವ ಕೋಱ್ಮಿದುಳಿಂ ದಿಶಾಮುಖಂ ಕಿಱಿಪೆಱೆದಿರ್ದ ಕೆಯ್ಗುಡಿಯ ಸಂದಣಿಯಿಂ (ವರ್ಧಪು. ೭-೪೮); ಚಿಮಿಚಿಮಿಸುತಿರ್ಪ ಕೋಱ್ಮಿದುಳಿಂ (ಶೃಂಗಾರ. ೧-೮೯). [ಕೊಱ್ + ಮಿದುಳ್]

❋

# ಕೋ

**ಕೋ₁ (ಕ್ರಿ).** ೧. ಮಣಿ ಮೊದಲಾದುವುಗಳನ್ನು ನೂಲಿನಿಂದ ಏರಿಸು ; ಪೋಣಿಸು : "ಕೋ – ಸೂತ್ರಪ್ರವೇಶೇ ಪೋಣಿಸು)" (ಶಮುಧಾ) ; ಇಂದ್ರನೀಲಮುಂ ಮುತ್ತುಮನೋಳಿಯೋಳಿಯೊಳ್ ಕೋದೆಱಲಿಕ್ಕಿದ ಮಾಲೆಯಂತೆವೋಲ್ (ಪಂಪಭಾ. ೧೧-೮೧); ಒಪ್ಪಮುಂ ತಾಳ್ದಿದ ಮಕರಪತಾಕಾಳಿಯಿಂ ಕೋದು ದೇವಾಯತನಂಗಳ್ . . . ರಂಜಿಸುತ್ತಿರ್ಪುವೆತ್ತಂ (ಕಾದಂಪೂ. ೨೯೬) ; ಮಾಲೆಗೋದವೋಲ್ ಸೊಗಯಿಪ ಪುಜರತ್ನಘಟಮಾಲೆ ಪಳಂಚಲೆದತ್ತು (ಮಲ್ಲಿಪು ೧೨-೧೩೯); ಮುತ್ತಂ ಮೆಱಸಂ ಕೋದಂತಿರೆ (ಕಾವ್ಯಾವ ೫೫) ; ರುದ್ರಾಕ್ಷಗಳ ಕೋವ ವಿಮಲ ಶಿವಲಿಂಗಕ್ಕೆ ರುದ್ರಾಭಿಷೇಕವುಂ ಮಾಳ್ಪ (ಚಬಪು. ೩೪-೨೫). ೨. ಸಿಕ್ಕಿಸು ; ಸೇರಿಸು : ರಥದ ಕೀಲ್ ಮುಱಿದಾಗಳೆ ಕೈಯನಲ್ಲಿ ಕೋದೆಸಗುವ ಸೂತರ್ (ಪಂಪಭಾ. ೧೧-೬೫) ; ಕೊಲಲೊಲ್ಲದಂಗಪತಿ ಬಿಲ್ಲೊಳೆ ಕೋದೆಳೆವಲ್ಲಿ ಗಂಡನಾಗನೆ (ಗದಾಯು. ೩-೨೭) ; ಪೊಸಪೊದೆ ಪೆಗಲೊಳ್ ಕೋದ ಕೊಱಬು ಬಡಿಕೋಲ್ . . . ದೇಸಿಯನೊದವಿಸಿ ನಡೆದತ್ತು ಬೇಂಟೆಗಾಱರ ತಂಡಂ (ಸೂಕ್ತಿಸು. ೩-೧೦೨) ; ವಿವಿಧ ವಾದಕರೊಳಗದೊರ್ವನ ಹೆಗಲ ಹಱವೊಂದ ತವಕಿಸದೆ ತೆಗೆಕೊಂಡು ತನ್ನೊಪ್ಪುವ ಹೆಗಲಿನೊಳು ಕೋದು (ಸಾಳ್ವಭಾ. ೮-೫೫); ಬಳಿಕ ಬೆನ್ನನು ಕೋದು, ಕೈಕಾಲ್ಗಳನು ತೇಲಿಸಿ, ಹೊಳೆದಳು ಮಳೆಯ ಬಿಲ್ಲಿನ ಹಾಗೆ (ಕಎಪು. ೩೮-೧೩). ೩. ಚುಚ್ಚು ; ತಿವಿ ; ನಾಟಿಸು : ಅಡೆಯಂ ಕೋವೆ [ಪಾಠಾಂ. ಡೆೃತ್ತುತುಂ ಮಾರ್ದನಿಗೆ ಮಸಗುತುಂ (ಲೀಲಾವ. ೫-೧೦೨) ; ತನ್ನೊಂದು ಕಾಯ್ಪಿಂದರಿಯಂ ಕೋದೆತ್ತಿ ಕೋಡೊಳ್ ತಳರ್ದು (ಸೂಕ್ತಿಸು. ೩-೩೫) ; ಹೊಳೆವೊಳೆವ ಕೂರಂಬಿನಲಿ ಕೋದನು ಗಜ ಮಸ್ತಕವ (ಕುವ್ಯಾದ್ರೋ. ೩-೭೪). ೪. ಕಟ್ಟು ; ಬಂಧಿಸು : ಪರಿವ ಬಂಡಿಯಂ ಕಾಲಿಂ ಕೋವರು ಮಣಲಂ ಸರವಿ ಪೊಸೆವರು (ಸೌಇಇ. IX-i, ೨೮೬-೧೮ ; 1190) ; ಉನ್ನತದ ಪಾಶದಿಂದಂತಕಂ ಕೋದೆಳೆಯೆ(ಚಬಪು. ೫೭-೧೯). ೫. ಸಿಕ್ಕು ; ವಶವಾಗು : ತಳಾಱರ ಕೋಱದ ಬಂದಿಯಲ್ಲಿ ಕಾಲ್ ಕೋದುದು (ಕಾವ್ಯಸಾ. ೧೨). ೬. ಸೇರಿಕೊಳ್ಳು ; ಜತೆಗೂಡು : ಅಂತಿಂತುಗಳ್ ಪದಾಪೂರಣದೊಳ್ ಕೋವುವು (ಶಮದ. ೩೧೮).

[ದೇ. ‖ ತಮಿ. ಮಲ. ಕೋ ; ಕೊಡ. ಕೊಯ ; ತೆಲು. ಕೋವ, ಕ್ರೋವ ; ಕೋಲಾ. ನಾಯ್ಕಿ. ಕೊಂಜ್ ; ಪರ್ಜಿ. ಕೋಪ್]

**ಕೋ₂** 'ಕೊಳ್₁' ಪರಾ.

**ಕೋಂಟೆ**, ಕೊಟ್ಟ೪, ಕೋಟೆ೧, ಕೋಟ್ಟೆ, ಕೋಟ್ಟೆ (ನಾ). ಸೇನೆಯ ಅಥವಾ ಪಟ್ಟಣದ ರಕ್ಷಣೆಗೋಸ್ಕರ ಕಟ್ಟಿದ ಭದ್ರವಾದ ಗೋಡೆಯ ಆವರಣ; ಎತ್ತರವೂ ಬಲವತ್ತರವೂ ಆದ ಸುತ್ತು ಗೋಡೆ; ಪುರಪ್ರಾಕಾರ; ಕಿಲ್ಲೆ; ದುರ್ಗ: ಪೊಬಲ ಪಡುವಣ ದೆಸೆಯ ಕೋಂಟೆಯ ಪೊಜಗಣ ದೆಸೆಯೊಳ್ (ವಡ್ಡಾರಾ. ೧೩೪-೧೭); ಕೋಂಟೆಯ ಚೆಲ್ವು ಪೊಗೞಲಱಿದೆನಿಸಿರೆ ನೆಗೆದುದು ನಭಮನೆಯ್ದೆ ಮಿಳಿರ್ವ ಪತಾಕಾವಳಿ (ಪಂಪಭಾ. ೪-೧೦); ಭಯದಿಂದಂಜನಚೋರಂ ಪದಕಮನೀಡಾಡಿಯಾ ಪುರದ ಕೋಂಟೆಯಂ ವಿದ್ಯಾಧರಕರಣದಿಂ ಲಂಘಿಸಿ (ಧರ್ಮಾಮೃ. ೨-೧೨೭); ಮುಗಿಲ ಸಲೆ ವಿಸ್ತಾರದಿಂ ನೋಡಲಾ ನಗರದ ಕೋಂಟೆಯೊಪ್ಪುವುದು (ಜೀವಂಸಾಂ. ೧-೩೮). **ಕೊಟ್ಟ೪**: ಪರಿತಂದು ಪೊಕ್ಕಜಸುವೊಡೆನ್ನ ಬೀಡು ಕೊಟ್ಟವಲ್ಲುದು (ಧರ್ಮಾಮೃ. ೬-೧೧೭); ನೀನೆಮಗೀಗ ಪಟ್ಟವ ಕಟ್ಟೆ ಸಾಗಿದರೆ ಕೊಟ್ಟವ ಮಾಡಿ ನಿಮ್ಮವರು ಬಾಗಿಲ ಹಾಕಿ ಇಟ್ಟು ಕೊಲ್ಲರೆ ಗುಂಡಿನೊಳಗೆ (ಹರಿಸಾಂ. ೨-೧೦೪); ಗಿರಿಕುಹರ ಕೊಟ್ಟ ಗಂಹರಗಳಲಿ ಕೋಹಿನಲಿ ಹಿರಿದು ಸೋಲಿಸಿ . . . ಹಿರಣ್ಮಯಕೆ ಬಂದು ಬಿಟ್ಟರು ಪಾಳ್ಯಮಂ (ತುರಂಗ. ೧೯-೨೨). **ಕೋಟೆ೧**: ಕೊಲ್ಲಿಪಲ್ಲವ ನೊಳಮ್ಬಂ ನ್ನೊಳಮ್ಬರಾದಿತ್ಯನನ್ವೆಸಸಲಾ ಕಾಕರಾಸರುಮೆೞ್ದು ಪೆರ್ಗುಂಜಿಯ ಕೋಟೆಯಾನ್ ರೋಹಿಸಿಬಿಟ್ಟು (ಎಕ. VIII. ಸೊರಬ. ೧೦-೪; 800); ಋರ್ಕೆಯ ಕೋಟೆಯೊಪ್ಪಿರೆ ನೆಗಱ್ತೆಯ ಸ್ವರ್ಗಂ (ಧರ್ಮಾಮೃ. ೩-೨೩೧); ತ್ರಿಪುರದ ಕೋಟೆ ಬಲ್ಲಿತ್ತೆಂದರೆ ನೊಸಲಕಂಗಳಲುರುಹಿದನವ್ವಾ (ಮಹಾದೇ. ೧೫-೩); ಕೈಮಾಡಿ ಕೊಂಡರು ಸುರರ ಕೋಟೆಗಳ (ಕುಮ್ಮಾದ್ರೌ. ೧-೫೨). ‘ಕೋಟೆಗಾಳೆಗ’ ಪರಾ. **ಕೋಟ್ಟೆ**: “ಕೋಟೆ (ಕೋಂಟೆ, ಕೊಟ್ಟ) – ಕೋಟ್ಟ, ಕೋಟ” (ತದ್ಭಕೋ. ೯). **ಕೋಟ್ಟೆ**: ಮಹಾರಾಜರುಂ ಬಾಣರಸರುಂ ಸೋರೆಮಟ್ಟ ಕೋಟ್ಟೆಂ ಯಿಟ್ಟಲ್ಲಿ(ಎಇ. XXIV, ೨೬-೫; 885).

ಕೋಂಟೆಕೊತ್ತಲ = ಕೋಟೆ ಮತ್ತು ಅದರ ಮೇಲಿರುವ ಬುರುಜು: ಕೋಂಟೆಕೊತ್ತಲಗಳನ್ನು ಹೊಸಹೊಸ ಭದ್ರತೆಗಳ ಭ್ರಾಂತಿಯಿಂದ ಜೀರ್ಣೋದ್ಧಾರಮಾಡಿಕೊಳ್ಳುತ್ತ (ಮಂತ್ರಶ. ೬೯).

[ದೇ. ‖ ತಮಿ. ಕೋಟ್ಟೈ; ಮಲ. ಕೋಟ್ಟ; ತುಳು. ಕೊಡ. ಕೋಟೆ; ತೆಲು. ಕೋಟ./ ಸಂ. ಕೋಟ]

**ಕೋಂಟೆಕಾಳಗ** ‘ಕೋಂಟೆಗಾಳೆಗ’ ನೋ.

**ಕೋಂಟೆಕಾಱ**, ಕೋಟೆಗಾಱ (ನಾ). ಕೋಟೆಯ ರಕ್ಷಕ. ‘ದಿಗರಿ ಗೋಂಟೆಕಾಱ’ ಪರಾ. **ಕೋಟೆಗಾಱ**: ಬೇಡ ಕೋಟೆಗಾಱರನು ತರಲಾಗದು (ಸೌಇಎ. ೧೯೩೧, ಮಂಗಳೂರು. ೩೩೬-೯; 1450).

[ಕೋಂಟೆ + -ಕಾಱ]

**ಕೋಂಟೆಕೋಲಾಹಲ**, ಕೋಟೆಕೋಲಾಹಲ, ಕೋಟೆಕೋಳಾಹಳ (ನಾ). ೧. ಶತ್ರುವಿನ ಕೋಟೆಯಲ್ಲಿ ಕೋಲಾಹಲವನ್ನು ಎಬ್ಬಿಸುವವನು; ಒಂದು ಬಿರುದು: ಕೋಂಟೆಕೋಲಾಹಲನೆನಿಪೀ ಬಿರುದನಾಂತು ರಾರಾಜಿಸಿದಂ (ಕೆಳನೃ. ೨-೨೨). **ಕೋಟೆಕೋಲಾಹಲ**: ೧. ಪ್ರತ್ಯರ್ಥಿಧರಣೀಪಾಲ ಕೋಟೆಕೋಲಾಹಲಾಭಿಧಃ (ಎಕ. VII, ಶಿವಮೊ. ೨-೩೦; 1641). ೨. ಕಂಠೀರವ ನರಸರಾಜೇಂದ್ರನ ಸೈನ್ಯದಲ್ಲಿದ್ದ ಒಂದು ಕೋವಿಯ ಹೆಸರು: ಕೋಟೆಕೋಲಾಹಲ ಕಲಿವೀರಭದ್ರನು ಲೂಟಿಯ ರಣಭೈರವನು ವಿಾಟನ ರಂಗನಾಥನು ವೈರಿಭಟಕುರುಪಟದ ಬಲುಗೋವಿಯಿಹುವು (ಕಂನವಿ. ೬-೧೯). **ಕೋಟೆಕೋಳಾಹಳ**: ೧. ಶ್ರೀಮದ್ದೆಡವ ಮುರಾರಿ ಕೋಟೆಕೋಳಾಹಳ (ಮೈಆರಿ. ೧೯೪೩, ೩೧-೫; ಸು. 1545); ಶ್ರೀಮದ್ದೆಡವ ಮುರಾರಿ ಕೋಟೆಕೋಳಾಹಳ . . . ಶಿವಗುರು ಭಕ್ತಿ ಪಾರಾಯಣ (ಎಕ. VII, ಶಿವಮೊ. ೨೮-೭; 1670).

[ಕೋಂಟೆ + ಕೋಲಾಹಲ]

**ಕೋಂಟೆಗಾವಲ್**, ಕೋಟೆಗಾವಲ್ (ನಾ). ಕೋಟೆಯ ಕಾವಲು, —ಕಾಪು; ದುರ್ಗರಕ್ಷಣೆ: ಪುರತ್ರಯದ ಕೋಂಟೆಗಾವಲ ಪಟುಭಟರ್ ಜತನವೆಂದು ನೇಮಿಸಿ (ಚೆಬಪು. ೪೨-೯). **ಕೋಟೆಗಾವಲ್**: ಕೋಟೆಗಾವಲ ಭಟರ ವಿವಿಧಾಯುಧಂಗಳ (ಜೈಮಿಭಾ. ೧೭-೯).

[ಕೋಂಟೆ + ಕಾವಲ್೧]

**ಕೋಂಟೆಗಾಳಗ** ‘ಕೋಂಟೆಗಾಳೆಗ’ ನೋ.

**ಕೋಂಟೆಗಾಳೆಗ**, ಕೋಂಟೆಕಾಳಗ, ಕೋಂಟೆಗಾಳಗ, ಕೋಟೆಗಾಳಗ, ಕೋಟೆಗಾಳೆಗ (ನಾ). ಕೋಟೆಯ ಕಾಳೆಗ, —ಯುದ್ಧ: ಲಗ್ಗೆಯೊಟ್ಟಳದೊಳಿಟ್ಟಳವಾದುದು ಕೋಂಟೆಗಾಳೆ [ಪಾಠಾಂ. ಳ]ಗಂ (ಚಂದ್ರಪು. ೫-೧೦೫); ಕಂಡರಾ ಸಮಯದೊಳ್ ಖಳರು ಗಜಬಜಿಸುವಾ ಖಂಡಳಾದ್ಯರ್ ಕೋಂಟೆ[ಪಾಠಾಂ ಕೋಟೆ]ಗಾಳೆಗವನೀಗ ಕೈಕೊಂಡರ್ (ಚೆಬಪು. ೪೨-೨೫). **ಕೋಂಟೆಕಾಳಗ**: ಆಸುರಮಾದುದು ಕೋಂಟೆಕಾಳಗಂ (ತ್ರಿಪುವಿ. ೫-೯). **ಕೋಂಟೆಗಾಳಗ**: ಕವಿದಿಸುವಂಬು ವಾರ್ದಿಸುವ ಕಕ್ಕಡೆ ಕುತ್ತುವ ಕೊಂತ . . . ಲಗ್ಗೆಮಾಡುವ ಭಟಕೋಟಿ ಕೋಟಲೆಯುನಾಳ್ದಿರೆ ನೀಳ್ದುದು ಕೋಂಟೆಗಾಳಗಂ (ಪುಷ್ಪಪು. ೭-೬೪). **ಕೋಟೆಗಾಳಗ**: ಕೋಟೆಗಾಳಗದ ಪ್ರತಿಯೊಂದು ಅಂಗವನ್ನೂ ಕಣ್ಣಿಗೆ ಕಟ್ಟುವಂತೆ ಸಂಪೂರ್ಣವಾಗಿ ಚಿತ್ರಿಸಿದವನೆಂದರೆ ವಿರೂಪಾಕ್ಷ ಪಂಡಿತನು ಒಬ್ಬನೇ ಒಬ್ಬ ಎಂದು ಹೇಳಬಹುದು (ಕರ್ನಾಜ. ೪೬). **ಕೋಟೆಗಾಳೆಗ**: ರಸವಾದಿಯಂತೆ ಕೊಲ್ಲೆನುತ್ತುಂ . . . ಕೋಟೆಗಾಳೆಗದಂತೆ ಪತ್ತೆನುತ್ತುಂ (ಧರ್ಮಾಮೃ. ೨-೭೧). [ಕೋಂಟೆ + ಕಾಳೆಗ]

**ಕೋಂಟೆವಱೆ** (ನಾ). ಕೋಟೆಯಲ್ಲಿ ಬಾರಿಸುವ ಒಂದು ಬಗೆಯ ಚರ್ಮವಾದ್ಯ, —ನಗಾರಿ: ಬಿಡದೆ ಕೂಗುವ ಪಹರೆ ತಿರುಗುತಿಪ ಪಂಜುಗಳ್ ಗಡಬಡಿಪ ಕೋಂಟೆವಱೆ ದನಿಗೆಯ್ವ ಪಟಲುಗಳ್ (ಚೆಬಪು. ೪೨-೧೦). [ಕೋಂಟೆ + ಪಱೆ೧]

**ಕೋಕ೧** (ನಾ). ೧. ಜಕ್ಕವಕ್ಕಿ; ಚಕ್ರವಾಕ: “ಕೋಕಃ, ಚಕ್ರಃ, ಚಕ್ರವಾಕಃ, ರಥಾಂಗಃ – ಈ ೪ ಜಕ್ಕವಕ್ಕಿ” (ಹಲಾಯು. ೪೧-೯೧); ಕೋಕಂ ಶೋಕಂ ಪಡೆಯೆ . . . ರಂಜಿಸಿತಿರುಳ್ (ಪುಷ್ಪಪು. ೮-೧೩); ಪಿರಹಂ ಕೋಕಂಗಳೊಳ್ (ದಶಕು. ೬-೪); ಅಲ್ಲಲ್ಲಿ ಕರಂ ನಿಂದು ನೆನೆದು ಸುಯ್ವುದು ಕೋಕಂ (ರಾಜಶೇ. ೧೧-೧೭). ೨. ತೋಳ; ಈಹಾಮೃಗ: “ಅರಣ್ಯಶ್ವಾ, ಕೋಕಃ, ಈಹಾಮೃಗಃ, ವೃಕಃ – ಈ ೪ ತೋಳಂ” (ಹಲಾಯು. ೩೮-೭೫); ಬಲೆ ಪಱಿವ ಕೋಕನಂತೊರ್ವ ವನಪಾಲಕಂ ಪೋಗಿ ದೇವೇಂದ್ರನಂ ಕಂಡು (ಪಂಪಭಾ. ೫-೯೩ ವ). ೩. ಕೋಗಿಲೆ; ಪಿಕ: ಕುಕಿಲ್ವ ನಲಿವ ಕೋಕದಿಂ (ಪಂಪಭಾ. ೧-೫೮). ೪. ಕಪ್ಪೆ; ಭೇಕ. ೫. ಖರ್ಜೂರದ ಮರ. ೬. ಹಲ್ಲಿ; ಗೌಳಿ. ೭. ಮರ; ವೃಕ್ಷ. ೮. ಶ್ರೇಷ್ಠ; ಉತ್ತಮವಾದುದು. ೯. ಕಾಮಶಾಸ್ತ್ರವನ್ನು ಬರೆದ ಒಬ್ಬ ಪಂಡಿತನ ಹೆಸರು. ‘ಕಕ್ಕೋಕ’, ‘ಕೋಕಶಾಸ್ತ್ರ’ ಪರಾ. “ಕ್ಷಿತಿಜದೊಳು ಖರ್ಜೂರದೊಳು ತೋಳನೊಳು ಭೇಕತತಿಯೊಳು, ರಥಾಂಗದೊಳು ಜ್ಯೇಷ್ಠೆಯೊಳು ಕೋಕಮಕ್ಕು” (ಮಂಗರಾ. ೧೫೨-೫೮); “ತರುಖರ್ಜೂರವನಶ್ವ ಚಕ್ರಯುಗಭೇಕಂ ಶ್ರೇಷ್ಠಮುಂ ಕೋಕಮಕ್ಕು” (ನಾನಾರ. ೧೨೯). [ಸಂ.]

**ಕೋಕ್ಕ೨** (ನಾ). ಒಳಗಿನ ತೆಳು ಪದರ ಅಂಟಿಕೊಂಡಿರುವ ಅಡಕೆ; ಕೀಳುಅಡಕೆ: ಗೋಟಡಿಕೆಗಿಂತ ಕೋಕಕ್ಕೆ ಬೆಲೆ ಕಡಿಮೆ (ರೂಢಿ).

[← ಮರಾ. ಖೋಕಾ, ಖೋಖಾ]

**ಕೋಕಕಟ್ವಳೆ** (ನಾ). ಕಕ್ಕೋಕಶಾಸ್ತ್ರದ ನಿಯಮ; ಕಾಮಶಾಸ್ತ್ರದ ಸೂತ್ರ: ಎಲ್ಲಿ ನೋಡಲು ಭರತ ಕೋಕಕಟ್ವಳೆಗಳನು ಸೊಲ್ಲಿಸುವ ಬೆಲೆವೆಣ್ಗಳು (ಪ್ರೌಢರಾ. ೬-೮). [ಕೋಕ$_1$ + ಕಟ್ವಳೆ]

**ಕೋಕನದ** (ನಾ). ಕೆಂಪುತಾವರೆ; ಕೆಂದಾವರೆ: "ಅರುಣಾಬ್ಜಮೆನೆ ಕೋಕನದಮೆನಲ್ ಕೆಂಪುದಾವರೆಯಕ್ಕು" (ಮಂಗರಾ. ೧೨೪-೧೬); ಆ ಕಾಂತೆಯ ಮೃದುತಳ ಪದ ಕೋಕನದಂ ತನ್ನ ರುಚಿಯಿನೊದವಿಸಿ ರಾಗೋದ್ರೇಕಮಂ (ಮಲ್ಲಿಪು. ೩-೫೭); ರತ್ನರಾಜಿ ಶೋಣಾದ್ರಿಗೆ ಪೂಗೊಳಕ್ಕೆ ನವಕೋಕನದಂ (ಉದ್ಭಟ. ೧-೯೬). [ಸಂ.]

**ಕೋಕನದಗರ್ಭ** (ನಾ). ತಾವರೆಯಲ್ಲಿ ಹುಟ್ಟಿದವನು; ಬ್ರಹ್ಮ: ಕೋಕನದಗರ್ಭನಿಂ ವಾಲ್ಮೀಕಿಯೆ ಕವಿ ಮುನಿನಿಕಾಯದೊಳ್ (ಜಗವಿ. ೧-೭). [ಕೋಕನದ + ಗರ್ಭ]

**ಕೋಕನದಜಠರ** (ನಾ). ಹೊಟ್ಟೆಯ ಮೇಲೆ ತಾವರೆಯನ್ನುಳ್ಳವನು; ವಿಷ್ಣು: ಕೋಕನದಜಠರನಂ ನಿವ್ಯಾ೯ಕುಳಮಿಂತೆಂದು ಧರ್ಮತನಯಂ ನುಡಿದಂ (ಪಂಪಭಾ. ೯-೧೪). [ಕೋಕನದ + ಜಠರ]

**ಕೋಕನದಪ್ರದ್ವಿಷ** (ನಾ). = ಕೋಕನದ ವೈರಿ ೧: ದಿನನಾಥಾಲಯ ಲಗ್ನದೊಳ್ ಕುಜಬುಧತ್ರಿಂಶಾಂಶಮಾದಂದು ಕೋಕನದ ಪ್ರದ್ವಿಷನಲ್ಲಿ ಕೂಡೆ ಪುರುಷಾಚಾರಾಢ್ಯ (ಜಾತತಿ. ೨೨-೭). [<ಸಂ. ಕೋಕನದಪ್ರದ್ವಿಷ್]

**ಕೋಕನದವೈರಿ** (ನಾ). ೧. ಕೆಂದಾವರೆಯ ಶತ್ರು; ಚಂದ್ರ: (ಕ). ೨. [ಛಂದ] ಒಂದು ಅಕ್ಷರಗಣ; ಭಗಣ: ಕೋಕನದ ವೈರಿ ದಿನಪಂಗಾ ಕಡೆಗೆ ವಾಯು ಬರೆ ಕೇಳಾ ಕಮಲಲೋಚನೆ ಪೆಸರ್ ನಾಕಿಗನಿನಾದುದುದಯಂ (ಛಂದೋಂಬು. ೨-೫೦). [ಕೋಕನದ + ವೈರಿ]

**ಕೋಕಮು** (ನಾ). ಒಂದು ಬಗೆಯ ಹುಳಿ ಹಣ್ಣು; ಆಮಸೋಲು; ಉಂಡೆಹುಳಿ (ಕರಾ): ಮುಂಬಯಿ ೨೮ ಮಣದ ಖಂಡಗದ . . . ಜೀನಸುಗಳು ೧. ಆಮಸೂಲ (ಕೋಕಮು); ೨ ಕವಡಿ (ಮುಂಬವ್ಯಾ. ೧೨೧). [← ಮರಾ. ಕೋಕಮ್]

**ಕೋಕರ** (ನಾ). ಒಬ್ಬಾತನ ಹೆಸರು: ಬಳಗಾಜರ ಕೋಕರಂ ಪುನುವಲವಳ್ಳಿಯಲಿಬ್ಬು ಪುಯ್ಯಲಂ ಪರಿದು ಮಾರ್ಬ್ಬಲಮಂ ತಳ್ತಿಱಿದು ಸ್ವರ್ಗ್ಗಾಲಯಕ್ಕೆ ಸನ್ದಂ (ಎಕ. VIII, ಸೊರಬ. ೫೩೦-೫; 979). [?]

**ಕೋಕಶಾಸ್ತ್ರ** (ನಾ). ಕೋಕನೆಂಬ ವಿದ್ವಾಂಸನಿಂದ ರಚಿಸಲ್ಪಟ್ಟಿದೆಂದು ನಂಬಲಾದ ಶಾಸ್ತ್ರ; ಕಾಮಶಾಸ್ತ್ರ: (ಕ). [ಕೋಕ$_1$ + ಶಾಸ್ತ್ರ]

**ಕೋಕಿ** (ನಾ). ಹೆಣ್ಣು ಚಕ್ರವಾಕ ಪಕ್ಷಿ; ಹೆಣ್ಣು ಜಕ್ಕವಕ್ಕಿ: ಕುಣಿಯಲೊಲ್ಲವು ನವಿಲ್ ಬೆರೆಯಲೊಲ್ಲವು ಕೋಕಿ (ಜೈಮಿಭಾ. ೧೯-೩೩); ಕೋಗಿಲೆ ಗಿಡಗ ಕೋಕಿಗಳ್ ಕಬ್ಬಾರೆ ಪದ್ದು ಪೆಣ್ಣಂಚೆ (ಸಿದ್ಧರಾ. ೬-೩೩); ಶಿವನ ಊರುದಂಡದಿಂದಾದ ಬಾಳೆಗಳು, ಹರನ ಕರನಖದಿಂದಾದ ಕೋಕಿಗಳು (ಶರಚ. ೨೮). [ಸಂ. ಕೋಕೀ]

**ಕೋಕಿಲ, ಕೋಕಿಳ** (ನಾ). ಕೋಗಿಲೆ; ಪರಪುಟ್ಟ; ಪಿಕ: "ಪಡಿಯಜವಕ್ಕಿಯೆನಲ್ಕೆ ಕೋಕಿಲನಕ್ಕುಂ" (ರನ್ನಕಂ. ೬); ಬಿರಯಿಯಂ ಮತ್ತಾಳಿಸೀ ಕೋಕಿಲ ಧ್ವನಿಯಿಂದಂಜಿಸುತುಂ (ಕಾದಂಉ. ೭೮೧); ವಿಯೋಗಿಗಳೆಂಬ ಮೃಗಂಗಳಂ ಭಯಂಗೊಳಿಸಿದುದುತ್ಕಕೀರ ಮದ ಕೋಕಿಲ ಗರ್ಜಿತ ತರ್ಜಿತಂಗಳಿಂ (ಅಜಿಪು. ೬-೨೩); ಕೋಕಿಲಂ ಕೊನರಂ ಕರ್ಚಿ ತೊದಳ್ ಸರಂಗೆಡೆದುದು (ಅನಂಪು. ೬-೭೨); ಕೋಕಿಲಂಗಳ್ ಕೊರಲ್ದೆಱಪು ಮಾಡೆ (ಭಾವಚಿಂ. ೪-೧೭). ಕೋಕಿಳ. "ಪಿಕಂ ಕೋಕಿಳಂ ಕಳಕಂಠಮನ್ಯಭೃತಮನ್ಯಪುಷ್ಟಂ ಕೋಗಿಲೆಯದೆನಿಕ್ಕುಂ" (ಮಂಗರಾ. ೫೦-೩); ಪಕ್ರವಾಕ್ಯಂ ಕೋಕಿಳಂಗಳೊಳಲ್ಲದ . . . ಜನಂಗಳೊಳಿಲ್ಲ (ಜಗವಿ. ೨-೧ ವ). [ಸಂ.]

**ಕೋಕಿಲತಂತ್ರ** (ನಾ). (ಕೋಕಿಲೆಯಂತೆ) ತನ್ನ ವಸ್ತುವನ್ನು ಹೆರವರು ಕಾಪಿಡುವಂತೆ ಮಾಡುವ ಯುಕ್ತಿ, —ಚಮತ್ಕಾರ: ಶ್ರೀನಿವಾಸಮೂರ್ತಿಗಳು ಗ್ರಂಥಲೇಖನಕ್ಕೆ ಮೊದಲು ಮಾಡಿದ ಕಾಲದಲ್ಲಿ ಕೋಕಿಲತಂತ್ರ ಕನ್ನಡ ಸಾಹಿತ್ಯ ಲೋಕದಲ್ಲಿ ಇನ್ನೂ ಮೊದಲಾಗಿರಲಿಲ್ಲ (ಮಹಾಗ. i, ಪ್ರಸ್ತಾವನೆ.). [ಕೋಕಿಲ + ತಂತ್ರ]

**ಕೋಕಿಲನಿನದ** (ನಾ). ಕೋಗಿಲೆಯ ಧ್ವನಿ, —ಇಂಚರ: "ಪುಗಿಲ್ ಪುಗಿಲೆನಿಪಾರಾವಂ ಕೋಕಿಲನಿನದಂ" (ಚತುನಿ. ೯೫). [ಕೋಕಿಲ + ನಿನದ]

**ಕೋಕಿಲಪ್ರಿಯ** (ನಾ). [ಸಂಗೀತ] ಒಂದು ತಾಳದ ಹೆಸರು: ಅವುಗಳೊಳು ಚಂಚತ್ಪುಟ . . . ಕೋಕಿಲಪ್ರಿಯ . . . ಜಯಾಳವೆಂಬಿವು ಮೊದಲಾದ ನೂಱೆಂಟು ತಾಳಂಗಳುಂ (ವಿವೇಕ. ೨೩೫). [ಕೋಕಿಲ + ಪ್ರಿಯ]

**ಕೋಕಿಲಸ್ವನ** (ನಾ). = ಕೋಕಿಲನಿನದ: ಅನುಲೇಪಾತಿಶಯ ಪ್ರಭಾವದಿನಿತಾಂಗೋಪಾಂಗಮುತ್ಕೋಕಿಲಸ್ವನ ಲೀಲಾ ಲಲಿತೋರು ಚಾರುನಿನದಂ (ಸುಕುಮಾ. ೫-೩೬). [ಕೋಕಿಲ + ಸ್ವನ]

**ಕೋಕಿಲಾಕ್ಷ** (ನಾ). ಕೊಳಗುಳಿಕೆ ಗಿಡ; ಇಕ್ಷುಗಂಧೆ: "ಇಕ್ಷುಗಂಧಾ, ಕಾಂಡೇಕ್ಷುಃ, ಕೋಕಿಲಾಕ್ಷಃ, ಇಕ್ಷುರಃ, ಕ್ಷುರಃ —ಈ ೫ ಕೊಳವಂಕೆ ಹೆಸರುಗಳು." (ಸಿದ್ಧಾಂತಿ. ೧೧೯). [ಸಂ.]

**ಕೋಕಿಲಾರವ** (ನಾ). = ಕೋಕಿಲನಿನದ: ಕೋಕಿಲಾರವಮದು ಬೀರ ಮದ್ದಳೆಯ ನಿಸ್ವನಮಾಗಿರೆ (ಚಂದ್ರಪು. ೭-೪೨). [ಕೋಕಿಲ + ಆರವ]

**ಕೋಕಿಲಾಸನ** (ನಾ). [ಯೋಗ] ಆಸನಗಳಲ್ಲೊಂದು: ಮುಖ್ಯವಾದ ಕೆಲವು ಆಸನಗಳು — ೧. ಉತ್ತಾನಾಸನ . . . ೪೬. ಕೋಕಿಲಾಸನ . . . ೭೯. ಭೈರವಾಸನ ಇತ್ಯಾದಿಗಳನೇಕವಿವೆ (ಭಾರದ. ೧೬೭). [ಕೋಕಿಲ + ಆಸನ]

**ಕೋಕಿಲೆ** (ನಾ). = ಕೋಕಿಲ: "ವನಪ್ರಿಯಃ, ಪರಭೃತಃ, ಕೋಕಿಲಃ, ಪಿಕಃ —ಈ ೪ ಕೋಕಿಲೆ" (ನಾಚಿರಾ. ೧೧೪). [ಸಂ. ಕೋಕಿಲ]

**ಕೋಕಿಳ** 'ಕೋಕಿಲ' ನೋ.

**ಕೋಕಿಹಾರಿಕೆ** (ನಾ). (?): ಕೈಯಣ ಗಿಂಡಿಯು ಕೊಂಕುಳ ಪೆಟ್ಟಿಗೆ ಕಲ್ಲಿಯಿಹುದು ತಲಕಟ್ಟು ಬಯ್ಕೆಗಳೆಂಬವು ಪರಿಪರಿ ನೋಡಲು ಕೋಕಿಹಾರಿಕೆ ಅಳವಟ್ಟು ಜ್ಞಾನವು ಇಲ್ಲವು ಪ್ರಸ್ತದ ಮನೆಯೊಳು ಹೋಳಿಗೆ ತುಪ್ಪವು ಗಬಕು ಧ್ಯಾನವಿಲ್ಲವು ಮೌನವಿಲ್ಲವು ಯಮನ ಕೈಯಿಂದಾ ದುಬುಕು (ಚಿವಾಕೋ. ೪೨-೪). [?]

**ಕೋಕೋ** (ನಾ). ೧. ಪಾನೀಯ ಮೊದಲಾದುವುಗಳಿಗೆ ಉಪಯೋಗವಾಗುವ ಬೀಜಗಳನ್ನು ಕೊಡುವ ಒಂದು ಜಾತಿಯ ಗಿಡ. ೨. ಕೋಕೋ ಬೀಜದಿಂದ ಮಾಡಿದ ಪಾನೀಯ: ಕಾಫಿಗೆ ಬದಲು ಕೋಕೋ ತಂದರು (ರೂಢಿ). [← ಇಂ. Cocoa]

**ಕೋಗಳಿ, ಕೊಂಗಳಿ$_{2}$, ಕೊಗಳಿ, ಕೊಗಳೆ, ಕೊಗೞ, ಕೊಗುಳಿ** (ನಾ). ಒಂದು ಸೀಮೆಯ ಹೆಸರು. ℗ ಈಗಿನ ಬಳ್ಳಾರಿ ಜಿಲ್ಲೆಯ ಕೋಗಳಿ: ಶ್ರೀಮತ್[ಕೇ] × [ಕ]ಜ್ಜಂ ಬಲ್ಲಹನ ಪಯಿ[ಯಿಂ] [ಕೋಗ]ಳಿಯಾಯ್ನೂಱುಮಂ ಮಾಸಿಯವಾಡಿ[ನೂಱ]ನಾಲ್ವತ್ತುಮ ನಾಳುತ್ತಮಿರ್ದು (ಸೌಇಇ. XI-i, ೨೨-೭; 897); ಸ್ವಸ್ತಿ ಶ್ರೀಮತು ನಾಲ್ಕು ಯುಗದ ಪೊಳಲು ಕೋಗಳಿಯ ಚಿತ್ರಕಾ × × × (ಸೌಇಇ XI-i, ೮೬-೫೦; 1050; ನೊಳಂಬವಾಡಿ ಮೂವತ್ತಿರ್ಚ್ಛಾಸಿರಕ್ಕಂ ಸಿಖಾಮಣಿಯೆ ನ್ನಿಯುಂ ಕೋಗಳಿಯಯ್ನೂಱಕಂ ಮೊದಲೆನ್ನಿನೆಗಬ್ದ ರಾಜಧಾನಿಪಟ್ಟಣಂಗಳ ಚಕ್ರವರ್ತ್ತಿ ಕೋಗಳಿಯ ಪೆರ್ಮ್ಮೆಯೆಂತೆಂದಡೆ (ಸೌಇಇ. IX-i, ೩೧೭-೨೭; 13ನೆಯ ಶತ).

**ಕೊಂಗಳ್ಳಿ₂ :** ಕೊಂಗಳಿಯಯ್ನೂಱುಂ ಕದಂಬಳಿಗೆ ಸಾಸಿರಮುಂ ಬಲ್ಲಕುಂದ ಮೂನೂಱುಂ (ಎಕ. XI, ದಾವಣ ೨೦-೪, 1045). **ಕೊಗಳಿ :** ಕೊಗ[ಪಾ ಶಾ ೦. ಗು]ಳಿಯನಾಳ್ವ ಕ್ರೌಂಚನೆಂಬರಸಂಗೆ (ವಡ್ಡಾರಾ. ೧೧೬-೧೫); ಇರ್ಮ್ಮಡಿ ನೊಱಂಬಂ ಬಲ್ಲಕುಂದೆ ೩೦೦ ಕೊಗಳಿ ೫೦೦ ಕದಂಬಳಿಂಗೆ ಸಾಸಿರವುಮನಾಳುತ್ತವಿರೆ (ಎಕ XI, ದಾವಣ ೧೯-೪; 1043). **ಕೊಗಳೆ :** ಈಶಾನ್ಯ ಕೊಗಳೆಯ ಹಾಳ ಹೊಲವೇರೆಯು ಹಳ್ಳದಿಂ(ಸೌಇಇ. IX-i, ೨೨೮-೧೫; 1133). **ಕೊಗಱಿ :** ಪಡೆವೋಗಿ ಕೊಯತ್ತೂರಿಱಿದಲ್ಲಿ ಕೊಗಱಿಯ ಒಕ್ಕಲ್ ಶ್ರೀಎರ್ಪ್ಪೊಯರ ಮಗ ಬೊಲ್ಲಗಂಗ ಗಾಮುಣ್ಡ ಸಿಱಿದು ಪಟ್ಟನ್ (ಎಕ. X, ಬೌಂಗ್. ೧೩-೪; 890). **ಕೊಗುಳಿ :** ಮೇಲಿನ 'ವಡ್ಡಾರಾ.' ಪ್ರಯೋಗದ ಪಾಠಾಂತರವನ್ನು ನೋಡಿ.

ಕೋಗಳಿ ಗಡಿಂಬ = ಕೋಗಳಿಯ ಸುತ್ತಮುತ್ತ ಪ್ರದೇಶದಲ್ಲಿದ್ದ ಒಂದು ಅಳತೆಗೋಲು : ಬಡಗಲು ಕೋಗಳಿಗಡಿಂಬದ ಉತ್ಕೃಷ್ಟವಪ್ಪೆರಿಯ (ಸೌಇಇ. IX-i, ೨೪೮-೨೪; 1147). [?]

**ಕೋಗಿಯೂರ್** (ನಾ). ಒಂದು ಊರಿನ ಹೆಸರು : ಕೋಗಿಯೂರ ಬಯಿಲೊಳ್ಪಾಳ್ಗಿಟ್ಟು ಕೊಣ್ಡಿಯ್ದಿದಂ (ಎಕ. XIV, ಎಡತೊ. ೩೧-೮; 900).
[ಕೋಗಿ ? + ಊರ್]

**ಕೋಗಿರು** 'ಕೋಗೀರು' ನೋ.

**ಕೋಗಿಲು** 'ಕೋಗಿಲೆ' ನೋ.

**ಕೋಗಿಲೆ, ಕೋಗಿಲು** (ನಾ). ೧. = ಕೋಕಿಲ : "ತಾಮ್ರಾಕ್ಷಃ – ಕೋಗಿಲೆ" (ಒಪಧಿ. ೬೭); ಕೋಗಿಲೆ ಚಾದಗೆ ಪೋದಗೆ ಮೂಗಿಗಲಿಂ ಜಂಜೆಕೊಂಚೆ . . . ಬಲಾಕೆ ಲಾವುಗೆ ಸೇನಂ (ಕಾವ್ಯಸಾ. ೧೦೪೪ ಶೂದ್ರಕ); ಮಾವಿನಂಕುರಮನೆ ಕರ್ಚಿ ಬಿಚ್ಚಱಿಪ ಕೋಗಿಲೆ (ಪಂಪಭಾ. ೫-೧೧); ಪುರುಡಿಪ ಕಾಗೆಯುಂ ನಲಿವ ಕೋಗಿಲೆಯುಂ ತೊಱೆದೆಯ್ದೆ ವೈರಮಂ (ಧರ್ಮಾಮೃ. ૩-೯೦); ಗಳಹುವರಗಿಳಿವಿಂಡಿನಲಿ ಹೆಕ್ಕಳಿಪ ಕೋಗಿಲೆಗಳಲಿ (ತೊರರಾ. ೧-೯-೧೧); ಕಾಗೆ ಕರಿದಾದರೆ ಕೋಗಿಲೆ ಆದೀತೆ (ಗಾದೆ). ೨. ಒಂದು ಜಾತಿಯ ಹುಳು : ಕಱಿಯ ಬಾಟುಕಮುಮನುಜ್ಜ್ವಳ ಲವಣಸಮೇತಮಿಕ್ಕು ಸುಂಠಿಯನರೆದಾಗಳೆ ನಸ್ಯಾಂಜನವಿಧಿಯಿಂದಲೆಗುಂ ಕೋಗಿಲೆಯುನಡಸಿ ಮೆಲ್ದಾ ವಿಷಮಂ (ಅಶ್ವಶಾ. ೧೧-೩೪); ಕೋಗಿಲೆಯಂ ತಿಂದ ಕುದುರೆ ಮೇಲುಸುರಾಕ್ಕುವುದು (ಅಶ್ವವೈ. ೧೨-೨೦ ಟೀಕು). ೩. ಜಾನುವಾರುಗಳಿಗೆ ಬರುವ ಒಂದು ಬಗೆಯ ರೋಗ : ನೆರೆ ಪುಟ್ಟಿಯತಱಪ್ಪಮು ಮಂತರದಿಕ್ಕಗೆ ಪಱಿಡಱಿಪೋಕುಮಾ ಕೋಗಿಲೆಯುಂ (ಲೋಕೋಪ. ೯-೨೧೧). ೪. = ಕೋಗಿಲೆಬಾಳೆ. 'ಕೋಗಿಲೆಯೆಲೆ' ಪರಾ. ೫. (ಕರಾ) ಮಾವಿನ ಹಣ್ಣಿನ ಓಟೆಯ ಒಳಗಿನ ತಿರುಳು. **ಕೋಗಿಲು :** ೧. "ಮತಃ – ಕೋಗಿಲು, ಅನೆವುಱಿ, ಕೋಣ, ಪುಗ್ಗಿ" (ಒಪಧಿ. ೯೭-೧೧೪). [< ಸಂ. ಕೋಕಿಲ]

**ಕೋಗಿಲೆಗಿಡ** (ನಾ). = ಕೋಗಿಲೆಬಾಳೆ : (ಶ).
[ಕೋಗಿಲೆ + ಗಿಡ (< ಗಿಡು)]

**ಕೋಗಿಲೆಪುಳು** (ನಾ). = ಕೋಗಿಲೆ ೨ : ಕೋಗಿಲೆಪುಳು ತಿಂದ ರೋಗ (ಅಶ್ವಶಾ. ೧೧-೩೩). [ಕೋಗಿಲೆ + ಪುಳು, (< ಪುೞು)]

**ಕೋಗಿಲೆಬಾಳೆ** (ನಾ). ಅಲಂಕಾರಕ್ಕಾಗಿ ಹೂದೋಟ ಮೊದಲಾದ ಕಡೆಗಳಲ್ಲಿ ಬೆಳೆಯಿಸುವ, ಬಣ್ಣಬಣ್ಣದ ಹೂಗಳನ್ನು ಬಿಡುವ ಪುಟ್ಟ ಬಾಳೆಗಿಡಗಳನ್ನು ಹೋಲುವ ಗಿಡ ; ಕಾಬಾಳೆ (ಉಕ).
[ಕೋಗಿಲೆ + ಬಾಳೆ₁ (< ಬಾೞೆ)]

**ಕೋಗಿಲೆಯೆಲೆ** (ನಾ). ಕೋಗಿಲೆ ಗಿಡದ ಎಲೆ ; ಕುಪ್ಪೆಯೆಲೆ : (ಶ).
[ಕೋಗಿಲೆ + ಎಲೆ₁]

**ಕೋಗಿಲೆವಱಿ** (ನಾ). ಕೋಗಿಲೆಯ ಮರಿ ; ಮರಿ ಕೋಗಿಲೆ : ಕೋಗಿಲೆವಱಿ ಮಾಮರದೊಳ್ (ಶಬ್ದಾನು. ೫೬ ವ್ಯಾಖ್ಯಾ).
[ಕೋಗಿಲೆ + ಪಱಿ]

**ಕೋಗಿಲೆವೆಣ್** (ನಾ). ಹೆಣ್ಣು ಕೋಗಿಲೆ : ಮದೋತ್ಸವದೆ ಕೋಗಿಲೆವೆಣ್ ಗಳಪಂ ನೆಗಟ್ಟುವಂತೆ (ಜಗವಿ ೧೬-೧೧೭); ಸಲಹಿ ಪೊದೆಱೆ ಮರಿಯಂ ಕೋಗಿಲೆವೆಣ್ ಕಾಕಂಗಳಿಂದೆ ಪಾರುವವರೆಗಂ (ಶಾಕುಂತ ೭೦-೧೨೨). [ಕೋಗಿಲೆ + ಪೆಣ್]

**ಕೋಗೀರು, ಕೋಗಿರು, ಖೋಗೀರು** (ನಾ). ೧. ಜೀನು; ಕುದುರೆಯ ಬೆನ್ನಮೇಲೆ ಹಾಕುವ ತಡಿ, —ದಟ್ಟವಾದ ಮೆತ್ತೆ; ಥಡಿ : ಬಸವಸೂ ತನ್ನ ಕುದುರೆಯನ್ನು ನಿಲ್ಲಿಸಿ ಕೋಗೀರು ಸೆಳದು ಹಿಂದಕ್ಕೆ ಸರಿಸಿದನು (ಚಿಕರಾ. ೩೪೭); ಕುದುರೆಯ ಮಾತಂತೂ ಆಯಿತು. ಇದರ ಕೋಗೀರು ತಂಗು ಮುಂತಾದ ಸಾಮಾನುಗಳನ್ನು ನೀವು ಹೊರಬೇಕೋ ನಾನು ಹೊರಬೇಕೋ . . . ಅಂದನು (ಕಥಾವು. IV, ೯೫). ೨. (ಆಲಂ) ಸವಾರಿ ಮಾಡುವುದು ; ಅಧಿಕಾರ ನಡೆಸುವುದು : ಸೋದರಸಂಬಂಧ . . . ಹೇಳಿದಹಾಗೆ ಕೇಳಿಕೊಂಡಿರುತ್ತ ಅಂತ ಮೆಚ್ಚಿ ಮೆಚ್ಚಿ ಇವಳನ್ನು ತಂದರೆ ನನ್ನಮೇಲೇ ಕೋಗೀರು (ಶ್ರೀಕಥೆ ೧೫೦). **ಕೋಗಿರು :** ೧. ಕೋಗಿರು ಕೆಳಗಣ ಸಂಣ ಪಟ್ಟಿ (ಎಕ. XIV, ನಂಜನ. ೨೮೯-೨; 1847). ೨. ಅತ್ತೆಯ ಮೇಲೆ ಕೋಗಿರು ಭರ್ತಿಮಾಡುವುದೇ ತನ್ನ ಕೆಲಸವೆಂದು ಅವರು ತಿಳಿದಿರಲಿಲ್ಲ (ಸಂಧ್ಯಾರಾ. ೧೩). **ಖೋಗೀರು :** ೧. ತಾವು ನಿಶಿರಾತ್ರಿಯಲ್ಲಿ ಎದ್ದು ಕುದುರೆಗೆ ತಾವೇ ಖೋಗೀರು ಹಾಕಿಕೊಂಡು ಹೊರಟಾಗ ಪೂರ್ಣ ಮುಂದಟ್ಟಾಯಿತು (ಸಕತ ೭೦).
[<— ಪಾರ. ಮರಾ. ಹಿಂ. ಖೋಗೀರ]

**ಕೋಗು** 'ಕೋಹು₁' ನೋ.

**ಕೋಗುಂಟೆ** (ನಾ). (?) : ಹನುಮಾನೆಂಬೋನು ಚಿಕ್ಕೋನು ದೊಡ್ಡೋನು ಕೋಗುಂಟೆ ಮೇಲೆ ಕೊನೆನಾಮ ಇಕ್ಕೊಂಡು ಚುಕ್ಕಿ ಬೆಳ್ಕಾಲ್ಲೀ ಹೊರಟಾನು (ಹುಟ್ಟಹ. ೩೩). [?]

**ಕೋಗುಂಡೆ** (ನಾ). ಒಂದು ಸ್ಥಳದ ಹೆಸರು (?) : ತಣಗೆರೆನಾಯಕರು ಕೋಗುಂಡೆ ಬಸವಪ ದೇವರಿಗೆ ಕೊಟ್ಟ ಹೊಂನು (ಎಕ. VII, ಚನ್ನಗಿ. ೧೪-೪; ?). [?]

**ಕೋಗುರಿವಾಜು** (ನಾ). ಗೇಣಿದಾರನು ಪ್ರತಿ ವರ್ಷ ಒಡೆಯನಿಗೆ ತೆರುವ ಗೇಣಿಯ ಕ್ರಮ, —ಪದ್ಧತಿ : ಎಲ್ಲಾವಕ್ಕೂ ಕೊಟ್ಟಾಗೆ ಕೋಗುರಿವಾಜು ಪ್ರಕಾರ ಗೇಣಿ ಕೊಡೂಕೆ ನಿಂಗಿಪ್ಪ ಇದ್ರೆ ಜಮೀನು ಇಟ್ಟೆ (ಪಂಜಪಂ. ೭೨). [ಕೋಗು (< ಕೋಹು₁) + ರಿವಾಜು]

**ಕೋಗೋಡು** (ನಾ). ಒಂದು ಊರಿನ ಹೆಸರು : ಕೋಗೋಡಿ ನೊಕ್ಕಲ್ತಗೆರೆನಾಡ ಕೂಡಿಬ್ದಲ್ಲಿ (ಮೈಆರಿ. ೧೯೩೯, ೩೬-೧ ; 1034); ಕೋಗೋಡಿನ ಸಕಲಗಾವುಣ್ಡುಗಳುವರ್ (ಮೈಆರಿ. ೧೯೨೪, ೧೪-೨ ; ?).
[?]

**ಕೋಚ್** 'ಕೋಚು₃' ನೋ.

**ಕೋಚ₁** 'ಕೋಸು₂' ನೋ.

**ಕೋಚ₂** (ನಾ). ೧. ಒಣಗುವುದು ; ಶುಷ್ಕವಾಗುವುದು ; ಇಂಗುವುದು. ೨. ಸಂಕೋಚ ಹೊಂದುವಿಕೆ ; ಕುಗ್ಗುವಿಕೆ. ೩. ವಕ್ರವಾಗುವಿಕೆ ; ಬಗ್ಗಿಸುವಿಕೆ. ೪. ಕದಿಯುವಿಕೆ. [ಸಂ.]

**ಕೋಚನ** (ನಾ). ಮುಚ್ಚುವಿಕೆ ; ಸಂಕೋಚಗೊಳಿಸುವಿಕೆ ; ಮುದುರುವಿಕೆ : (ಶ). [< ಕೋಚ₂]

**ಕೋಚಿ₁** 'ಕೋಸು₂' ನೋ.

**ಕೋಚ್ಚಿ** (ನಾ). ಕುಟಿಲಸ್ವಭಾವದವನು; ಕುಹಕಿ; ಕಪಟ (?): ಆ ಸಚರಾಚರಾತ್ಮಕನವದಿರೆಚ್ಚಂಬುಗಳನಂಬರದ ಆಚೆಯಲಿ ನೆಲಕು ದುರಬಿಡದೆ ವಿಲೋಚನದ ಕಿಡಿಗಳಲಿ ಸುಟ್ಟಾ ಕೋಚಿಗಳ ಕುಣಿದಾಡಿ ಸುತಲಿರ್ದನು ಮುರಧ್ವಂಸಿ (ಪ್ರಹ್ಲಾಚ. ೧೫–೨೬). [ಕೋಚು$_1$ (< ಕೋಸು$_2$) + –ಇ$_3$]

**ಕೋಚಿಮಾಡು, ಕೋಚುಮಾಡು** (ಕ್ರಿ). ತುಂಡುಮಾಡು; ಕತ್ತರಿಸು: ಪವನಜಂ ಕೂರ್ಗಣೆಯ ಜಕ್ಕುಲಿಸಿ ಜಡಿದು ಬಿಡಲರಿ ಧನುವ ಸಾರಥಿಯ ತುರಗಮಂ ಹೊಂದೇರನು ಕೋಚಿಮಾಡಿದನೆರಡು ಸರಳಿನೊಳ್ (ತುರಂಗ. ಲ೫–೫೫). **ಕೋಚುಮಾಡು**: ಕಟುವಾದ ಮಾತಿನಿಂದ ಆವನನ್ನು ಕೋಚುಮಾಡಿದರು (ರೂಢಿ). [ಕೋಚ್ಚಿ + ಮಾಡು$_1$]

**ಕೋಚು$_1$** 'ಕೋಸು$_2$' ನೋ.

**ಕೋಚು$_2$** (ನಾ). ಕದ; ಬಾಗಿಲಿನ ರೆಕ್ಕೆ: "ಕೋಚೆಂದು ಪೇಟಿಲ್ ಪಡಿಗಕ್ಕುಂ ಪೆಸರ್" (ಕವಿಕಂ. ೨೪೨). [?]

**ಕೋಚು$_3$, ಕೋಚ್** (ನಾ). ನಾಲ್ಕು ಗಾಲಿಯ ಕುದುರೆಗಾಡಿ; ಸಾರೋಟು: ಕೋಚುಗಾಡಿಗಳು ಈಗ ಹೆಚ್ಚು ಉಪಯೋಗದಲ್ಲಿಲ್ಲ (ರೂಢಿ). **ಕೋಚ್**: ಕೋಚ್ ಒಂದಕ್ಕೆ ಬೆಳಗ್ಗೆ ಎರಡು ಕುದುರೆ, ಸಂಜೆಗೆ ಎರಡು (ಚೆಂಗೂಲಿ ೭೫). [← ಇಂ. Coach]

**ಕೋಚು$_4$** (ನಾ). ೧. "ತುದಿ" (ಜಾನಕೋ. ೪೨). ೨. "ಏರುದನಿ" (ಜಾನಕೋ. ೪೨). 'ಕೋಚೆತ್ತು' ಪರಾ. [?]

**ಕೋಚುಬಂಡೆ** (ನಾ). ಓರೆಕೋರೆಯಾಗಿ ಚಾಚಿಕೊಂಡಿರುವ ಬಂಡೆ; ವಕ್ರಶಿಲೆ: ನದಿಯಲ್ಲಾಗಲಿ, ಸಮುದ್ರದಲ್ಲಾಗಲಿ ಹೂತು ಕೊಂಡು ಸಂಚಾರಕ್ಕೆ ಅಡಚಣೆಯುಂಟು ಮಾಡುವ ಮರದ ತುಂಡು, ಕೋಚುಬಂಡೆ ಮೊದಲಾದುವು (Snag. ಇಂಕನಿ). [ಕೋಚು$_1$ (< ಕೋಸು$_2$) + ಬಂಡೆ]

**ಕೋಚುಭಟ್ಟ, ಕೂಚಂಭಟ್ಟ, ಕೂಚಿಭಟ್ಟ, ಕೂಚುಭಟ್ಟ, ಕೂಸಂಭಟ್ಟ** (ನಾ). ಬುದ್ಧಿಗೇಡಿ; ಅವಿವೇಕಿ; ಅರೆಮರುಳ: ಓದಿ ಓದಿ ಮರುಳಾದ ಕೋಚುಭಟ್ಟ (ಗಾದೆ). **ಕೂಚಂಭಟ್ಟ**: ಚಂದದ ಗಾಜಿನ ಮನೆಯಲ್ಲಿ ಕೂತು ಕೂಚಂಭಟ್ಟರಾಗಿದ್ದೇವೆ (ಹೊಸಕ್ಷಿ. ೮೫). **ಕೂಚಿಭಟ್ಟ**: ಓದಿ ಮರುಳಾದೆಯೋ ಕೂಚಿಭಟ್ಟರೆ (ಸಿದ್ದೇವ. ೭೫–೨೧೮). **ಕೂಚುಭಟ್ಟ**: ಓದಿ ಓದಿ ಮರುಳಾದ ಕೂಚುಭಟ್ಟ (ರೂಢಿ). **ಕೂಸಂಭಟ್ಟ**: ಕೂಸಂಭಟ್ಟ (ಓದಿ ಓದಿ ಮರುಳಾದವನು) (ನಮ್ಮನು. ೧೦೮). [ಕೋಚು$_1$ (< ಕೋಸು$_2$) + ಭಟ್ಟ]

**ಕೋಚುಮಾಡು** 'ಕೋಚಿಮಾಡು' ನೋ.

**ಕೋಚೆ** 'ಕೋಸು$_2$' ನೋ.

**ಕೋಚೆತ್ತು** (ಕ್ರಿ). ಏರುದನಿಯಿಂದ ಕೂಗು; ಗಟ್ಟಿಯಾಗಿ ಮಾತ ನಾಡು: "ದನಿಯೆತ್ತು" (ಜಾನಕೋ. ೪೨). [ಕೋಚು$_4$ + ಎತ್ತು$_1$]

**ಕೋಜ** (ನಾ). (?): ಸಣ್ಣಮೈದಿಯ ಕಣಿಕ ಬೆಣ್ಣೆಸಕ್ಕರೆ ಕೋಜ ಬಣ್ಣಿಗೆವಡೆದ ಸೋವಿಯಿಂ ಕಲಸಿ ಕೈಗ್ನೆವುತಣ್ಣೆವಾಲ್ಗೆನೆವೊಡೆದ ಘಟರಿ ಘೃತ ಮಿಶ್ರದಿಂ ದಣ್ಣನೆ ದಣಿಯ ಪಚವಿಸಿ ತಣ್ಣದೂಷ್ಣಂ ಸಮಾನಂ ಗೊಳಿಸಿ ತೆಗವುತಂ ಕಣ್ಣಂಜಲಾಗದಂತಿರಿಸಿ ಬಾಳೆಯ ಚೆಲ್ವ ಹಣ್ಣು ಹೆರದುಪ್ಪದಿಂ ಘೂರಿಕೆಯನರ್ಪಿಸಿದೆ ಮಿಣ್ಣಿಗೆ ಶಿವಾದ್ವಯಿತರು (ಲಿಂಗವು. ೮–೧೨); ಸೂಜಿ ನಡೆತಂದಯಸ್ಕಾಂತಮಂ ಪಿಡಿದಿಂದುತೇಜಮುಂ ಶಶಿಕಾಂತ ಪಿಡಿದೊಜಹುಗಂಡತುಳ ವಾಜಿಯ ಧ್ವನಿಗೆ ವಾಹಕ ಪೆಚ್ಚು ಬಲಿದು ನವ ಕೋಜದಿಂ ಪ್ರಣಯವೆತ್ತು ಈ ಜಗದಿ ಮೆಜವಂತೆ ಭಕ್ತ ಕಾರಣನಾಗಿ ನೀ ಜೀವದಿ ಸುಳಿದು ಸುಲಭತ್ವ ಸಂಭವಿಸೆ ಮಹ ತೇಜ ವಿಖ್ಯಾತರಾದರ್ನಿಖಿಳ ಶರಣ ಭೂಜನ್ಮ ಶೇಷವಳಿದು (ಲಿಂಗವು. ೨೨–೧೮). [?]

**ಕೋಜದೇವ** (ನಾ). ಒಬ್ಬಾತನ ಹೆಸರು: ಮಲ್ಲಯ್ಯಂಗಳ ಮಕ್ಕಳು ಕೋಜದೇವ ಆಗಳು ಬಿಟ್ಟ ಧರ್ಮ್ಮ (ಪ್ಮೆಆರಿ. ೧೯೪೬, ೧೦–೬; ?). [ಕೋಜ ? + ದೇವ]

**ಕೋಜಯ್ಯ** (ನಾ). ಒಬ್ಬಾತನ ಹೆಸರು: ಸಾಯಿಲರ ಕೋಜಯ್ಯ ಕೊಟಿರರ ಆಳಿಯ ಸಿರಿ ಮೇಜಿ ತುಜುವಾಸ್ನಿಕ್ಕಿಸಿ ಕಾದಿ ಸತ್ತ (ಎಕ. X, ಶಿಡ್ಲಘ. ೫೯–೪; 900). [ಕೋಜ ? + ಅಯ್ಯ$_1$]

**ಕೋಜು** (ನಾ). ಪತ್ತೆಹಚ್ಚುವುದು; ಶೋಧನೆ; ತಪಾಸಣೆ: ನೀನು ಊರಿಗೆ ತಳವಾರನು, ಊರಿನಲ್ಲಾದ ಕಳ್ಳತನದ ಕೋಜನ್ನು ನೀನೆ ಮಾಡಬೇಕು (ಕಥಾಮಂ. IV, ೨೭). [← ಹಿಂ. ಮರಾ. ಖೋಜ್]

**ಕೋಜೋತಗವುಣ್ಡ** (ನಾ). ಒಬ್ಬಾತನ ಹೆಸರು: ಕೋಜೋತ ಗವುಣ್ಡರ ಮಗ ಎಜೆಯಮ್ಮ ವೆಳಚ ಗವುಣ್ಡರ ಪಟ್ಟದಳ ಪೊನ್ನಚರಿ ಮಾಡಿದಂ (ಎಕ. IX, ಹೊಸಕೋ. ೮೭–೨; 750). [ಕೋಜೋತ? + ಗವುಂಡ (< ಗಾಮುಂಡ)]

**ಕೋಟ್** 'ಕೋಟು$_2$' ನೋ.

**ಕೋಟ$_1$** 'ಕೊಟ್ಟು$_3$' ನೋ.

**ಕೋಟ$_2$** 'ಕೊಟ್ಟ$_2$' ನೋ.

**ಕೋಟ$_3$** (ನಾ). ೧. ವಕ್ರತೆ; ಕುಟಿಲತನ. ೨. ಗುಡಿಸಲು; ಜೋಪಡಿ. ೩. ಕೋಟೆ; ಖಿಲ್ಲೆ. [ಸಂ.]

**ಕೋಟ$_4$** (ನಾ). ೧. ಒಂದು ಊರಿನ ಹೆಸರು. ೨. (ಕರಾ) ಬ್ರಾಹ್ಮಣರಲ್ಲಿ ಒಂದು ಪಂಗಡದ ಹೆಸರು; ಆ ಗುಂಪಿಗೆ ಸೇರಿದ ವ್ಯಕ್ತಿ: ಕೋಟರು, ಸಕಳಾಪುರಿ, ಶಿವಳ್ಳಿ ಇವು ಹೈಗರೊಳಗಿನ ಒಳ ಭೇದಗಳು (ಕಥಾಗ. ೮೫). [?]

**ಕೋಟ$_5$, ಕೋಟಾ$_1$** (ನಾ). ಒಟ್ಟು ಮೊತ್ತದಲ್ಲಿ ಒಬ್ಬ ವ್ಯಕ್ತಿ ಅಥವಾ ಸಂಘವು ಒದಗಿಸಲೇಬೇಕಾದ ಅಥವಾ ಪಡೆಯಲು ಹಕ್ಕುಳ್ಳ ಪಾಲು, —ಭಾಗ, —ಅಂಶ; ಪಸುಗೆ: ವಾರದ ಒಲುಮೆಯ ಕೋಟವು ನಾಳೆಯೆ ಎಂದ ನಲ್ಲೆಯ ನಲ್ಲ ನೋಡಿ (ಚಂದ್ರವೀ. ೧೫೨–೭). **ಕೋಟಾ$_1$**: ಈ ವಾರದ ಕೋಟಾ (ರೂಢಿ). [← ಇಂ. Quota]

**ಕೋಟಗಾಮುಂಡ** (ನಾ). ಒಬ್ಬಾತನ ಹೆಸರು: ಕೋಟಗಾಮುಣ್ಡನುಂ [ಮಾದಿ]ಗಾಮುಣ್ಡನ ಸಹಿತ ದಿರ್ಬಲ್ಲುಮಾದರ[ನುಂ] (ಸೌಇಇ. XI–i, ೭–೨೧; 837). [ಕೋಟ ? + ಗಾಮುಂಡ]

**ಕೋಟಗಾಱ** (ನಾ). ಕೋಟೆಯ ರಕ್ಷಣೆಯಲ್ಲಿರುವವನು; ದುರ್ಗ ಪಾಲಕ: ಬಲದೊಡ್ಡುಯೆಡವಂಕದೊಳು ಸಲೆ ಮೆಱೆದು ಕಡುಗಲಿ ಕೋಟ [ಪಾಠಾಂ. ಟ] ಗಾಜರ ಬಲು ಪೌಜು ಬಣ್ಣಿಪೆನೇನ (ಕುರಾಸಾಂ. ೧೨–೩೪). [ಕೋಟ$_3$ + –ಕಾಱ]

**ಕೋಟರ** (ನಾ). ೧. ಮರದ ಪೊಟರೆ; ಡೊಗರು; ಟೊಳ್ಳು: "ನಿಷ್ಕುಟಃ, ಕೋಟರಃ–ಈ ೨ ಮರದ ಪೊಟಲ್" (ಹಲಾಯು. ೩೦–೨೮); ಒಂದು ಮಹಾವಟವಿಟಪಿಕೋಟರಮನು ಕುಲಾಯಮಾಗಿ ಕಾಕ ಮಿಥುನ ಮಿರ್ಕುಂ (ಪಂಚತಂ. ೮೨–೩); ಅದ್ರಿಕುಜಂಗಳ ಕೋಟರಂಗಳೊಳ್ ಪೋದಗೆ ತತ್ತಿಯಿಕ್ಕಿದುದು (ಜಗವಿ. ೪–೭); ಕೋಟರದೊಳ್ ಪುಗುವ ವಿಹಗಂಗಳಂ (೧೧ಕ. ೪–೭೦). ೨. ಒಳಗಿನ ಭಾಗ; ಬಿಲ; ರಂಧ್ರ: ದುರ್ಜನ ಪ್ರಕರದ ಕರ್ಣಕೋಟರಮನೇಕೆಯೊ ಮಾಡಿದನಬ್ಬ ವಿಸ್ತರಂ (ಸಂರಾಮಾ. ೧–೩೧); ಅನಿಮಿಷಯ್ಯನ ಜೀವಕಳೆ ಬಂದು ನಾಟತೀತನ ದಿವ್ಯದೇಹದ ಕೋಟರದೊಳೇನೆಂಬೆನೈ (ಪ್ರಭುಲೀ. ೧೧–೨೮); ಕರ್ಣದ ಕೋಟರಂಗಳು ಕಿವುಡುಗೊಳೆ (ತೊರರಾ. ೬–೨೬–೪). [ಸಂ.]

**ಕೋಟರಪುಷ್ಪಿ** (ನಾ). ಒಂದು ಬಗೆಯ ಗಿಡ; ಎಮ್ಮೆಬಳ್ಳಿ: "ವ್ಯಾಳಿ ಕೋಟ[ಪಾಠಾಂ. ಠ]ರಪುಷ್ಪಿಯೆನಲೆಮ್ಮೆವಳ್ಳಿ" (ಮಂಗರಾ. ೪೪-೪೬). [ಕೋಟರ + ಪುಷ್ಪಿ]

**ಕೋಟರಿ** (ನಾ). = ಕೋಟವಿ: (ಶ). [ಸಂ. ಕೋಟರೀ]

**ಕೋಟಲಿಗ** (ನಾ). ಕೋಟಲೆ ಕೊಡುವವನು; ಹಿಂಸೆ ಮಾಡುವವನು; ಪೀಡೆ ಕೊಡುವವನು: (ಶ). [ಕೋಟಲೆ + -ಇಗ]

**ಕೋಟಲೆ** (ನಾ). ತೊಂದರೆ; ಕಷ್ಟ; ಕಾಟ: "ಕೋಟಲೆಯೆನೆ ನೋವು" (ಭಾರನಿ. ೪೯); ಅನುಭವಿಸಿದ ಕೋಟಲೆಗಳನಿನಿಸೆಂದೆಣಿಸಲ್ಕೆ ಮೌಕ್ತಿಕಾಕ್ಷಾವಳಿಯುಂ ವನಜದಳನಯನೆ ಸಮೆದಪಳೆನೆ ಸುರಿದುವು ತರದೆ ತೋರಕಣ್ಬನಿದುಜುಗಲ್ (ಕಾದಂಉ. ೨೯೨); ಸಲೆ ತಲೆಗೆಟ್ಟೋಡುವ ಕೋಟಲೆಗಾಜದೆ ತದ್ಗಿರೀಂದ್ರಮಂ ಸಾರ್ದು (ವರ್ಧಪು. ೧೦-೧೩); ಬೇಟದ ಕೋಟಲೆಯೊಳವನ ಮೇಲ್ವಾಯ್ದು (ದಶಕು. ೧೨-೭೮); ತಾಟಿಂತ್ರ ಮೈಯು ಬಡಿವಾಗ ಮುದಿಯನ ಕೋಟಲೆಯ ನೋಡ (ಸರ್ವಜ್ಞ. ೧೮೨೧); ಅಟ್ಟುಂಬೋದು ಆರು ಕೋಟಲೆ ತಿರಿದುಂಬೋದು ಪರಮ ಸುಖ (ಗಾದೆ).

[ದೇ. ‖ ತಮಿ. ಕೋಟ್ಪಾಲೈ; ಮಲ. ಕೋಟಿ; ತುಳು. ಕೋಟಲೆ; ತೆಲು. ಕೋಡಾಡು]

**ಕೋಟಲೆಗುಡು** (ಕ್ರಿ). ಕೋಟಲೆ ಕೊಡು; ತೊಂದರೆಯನ್ನುಂಟುಮಾಡು; ಕಷ್ಟಕೊಡು; ನೋಯಿಸು: ನಿರಂತರವಾಗಿ ಕೋಟಲೆಗುಡುವ ನಮ್ಮ ಒಂದು ಅಂಗದಲ್ಲಿ (ಸುಗುಗಂ. ೬೪).

[ಕೋಟಲೆ + ಕುಡು$_{1}$ (< ಕೊಡು$_{1}$)]

**ಕೋಟಲೆಗೊಳ್** (ಕ್ರಿ). ತೊಂದರೆಪಡು; ಶ್ರಮಪಡು; ಕಷ್ಟಪಡು; ನೋವನ್ನನುಭವಿಸು: ಬಡಿವ ಕಾಲ್ ಭೂಭಾಗದೊಳ್ ತಂದು ತಾಟಿಸುತುಂ ಕೋಟಲೆಗೊಳ್ವ ರತ್ನಮುಕುಟದ್ಯೋತೋತ್ತಮಾಂಗಂ (ಪಂಪಭಾ. ೧೨-೧೫೧); ಅಂ ತಪೋವನದೊಳ್ಕೋಟಲೆಗೊಂಡು ದುಃಖದೆ ತಪಂಗೆಯ್ವುತ್ತಿರಲ್ (ಕಾದಂಪೂ. ೯೮೯); ಸಂತತಂ ಕುದಿದು ಕೋಟಲೆಗೊಂಡೆನಿನ್ನೆಗಂ (ವಾಗೀರ. ೨೬೧); ತನಿಗುದಿಗುದಿದು ಕೋಟಲೆಗೊಂಡು ದರಿಸೇನೆ (ಕುಮಾದ್ರೋ. ೧೯-೩೬); ಊಟ ನಿದ್ದೆಗಳೊಂದರೊಳು ಸುಖವಿಲ್ಲದೆ ಕೋಟಲೆಗೊಂಡು ಕುಗ್ಗುವರು (ಹದಿಬ. ೬-೭); ತೋಟ ಮಾಡಿದವನು ಕೋಟಲೆಗೊಳ್ಳ (ಗಾದೆ). [ಕೋಟಲೆ + ಕೊಳ್$_{1}$]

**ಕೋಟಲೆಗೊಳಿಸು** (ಕ್ರಿ). ಕೋಟಲೆಗೆ ಗುರಿಮಾಡು; ಹಿಂಸೆಪಡಿಸು; ಕಾಡು; ನೋಯಿಸು: ಅಮರತ್ವಮಂ ಪಡೆದಮರಸಮಿತಿಯಂ ಕೋಟಲೆಗೊಳಿಪ ಹಿರಣ್ಯಾಕ್ಷನಂ (ಪಂಚತಂ. ೨೪೮-೧೦); ಕೋಟಲೆಗೊಳಿಪರು ವಿಟವಿದೂಷಕರ ಕಣ್ಬೇಟದಿ ಮರುಳುಮಾಡುವರು (ಮೋಹತ. ೧೮-೪೮); ಬಲು ಮೃಗವು ಮರಪಕ್ಷಿ ಕೀಟಕ ಜಲಚರೌಘದಿ ಜನಿಸಿದೆನು ಕೋಟಲೆಗೊಳಿಸಬೇಡಕಟ ಮಾನವನಾದ ಬಳಿಕಿನ್ನು (ಹರಿಸಾ. ೫೭).

[ಕೋಟಲೆಗೊಳ್ + -ಇಸು$_{3}$]

**ಕೋಟಲೆಪಡು** 'ಕೋಟಲೆವಡು' ನೋ.

**ಕೋಟಲೆಬಡಿಸು** 'ಕೋಟಲೆವಡಿಸು' ನೋ.

**ಕೋಟಲೆಬಡು** 'ಕೋಟಲೆವಡು' ನೋ.

**ಕೋಟಲೆವಡಿಸು, ಕೋಟಲೆಬಡಿಸು** (ಕ್ರಿ). ತೊಂದರೆಗೆ ಗುರಿಮಾಡು; ಕಾಟಕೊಡು; ನೋಯಿಸು: ಪಿರಿದುಂ ಕೋಟಲೆವಡಿ[ಪಾಠಾಂ. ಗೊಳಿ]ಸುವ ದುರಿತಾರಾತಿಗಳನಾವಗಂ ಗೆಲ್ದುದಜಿಂದರಹಂತನೆಂಬ ನಾಮಂ ಪರಮಜಿನಂಗೆ (ಸಮಃಪ. ೮-೨೦೦). **ಕೋಟಲೆಬಡಿಸು:** ತನ್ನ ಪಾಪ ಕೈಗೆಡಿಸಿ ಕೋಟಲೆಬಡಿಸುವುದು (ಕರ್ಣವೃ. ೧೦-೩೧).

[ಕೋಟಲೆವಡು + -ಇಸು$_{3}$]

**ಕೋಟಲೆವಡು, ಕೋಟಲೆಪಡು, ಕೋಟಲೆಬಡು** (ಕ್ರಿ). ಕಷ್ಟಪಡು; ತೊಂದರೆಗೊಳಗಾಗು; ಹಿಂಸೆಗೆ ಗುರಿಯಾಗು; ನೋವನ್ನನುಭವಿಸು: ಕೋಟಲೆವಟ್ಟೀ ಸಿಪ್ಪಲೋದ್ಯೋಗಮನೊಡರಿಪುದೇನ್ (ಪಂರಾಮಾ. ೧೬-೫೫). **ಕೋಟಲೆಪಡು:** ನಿನ್ನನ್ನು ದೊಡ್ಡವನನ್ನಾಗಿ ಮಾಡಲು ನಾನೆಷ್ಟು ಕೋಟಲೆಪಟ್ಟೆ (ರೂಢಿ. **ಕೋಟಲೆಬಡು.** 'ಕೋಟಲೆಬಡಿಸು' ಪರಾ. [ಕೋಟಲೆ + ಪಡು$_{1}$]

**ಕೋಟವಿ** (ನಾ). ೧. ಬತ್ತಲೆ ಹೆಂಗಸು: "ನಗ್ನಾ, ಕೋಟವೀ-ಈ ೨ ನಗ್ನೆ" (ಹಲಾಯು. ೭೯-೩೨೯). ೨. ದುರ್ಗಾದೇವಿ. 'ಕೋಟವಿಪುರ' ಪರಾ. [ಸಂ. ಕೋಟವೀ]

**ಕೋಟವಿಪುರ** (ನಾ). (ಅಮೃತ ಸಮುದ್ರದ ಮಧ್ಯದಲ್ಲಿರುವ ಮಣಿದ್ವೀಪದಲ್ಲಿ ನೆಲಸಿರುವುದಾಗಿ ಪುರಾಣಗಳಲ್ಲಿ ವರ್ಣಿತವಾದ) ದುರ್ಗಾದೇವಿಯ ಪಟ್ಟಣ: ಸುರಪುರಕೆ ಹರಪುರಕೆ ಹರಿಯಿಹ ಪುರಕೆ ಅಳಕಾಪುರಕೆ ಕೋಟವಿಪುರಕೆ . . . ಬೊಮ್ಮನಪುರಕೆ ನೂರ್ಮಡಿ ಮಿಗಿಲೆನಿಸಿ ತಾ ಕರ ಚೆಲುವಿನಿಂದೆಸೆವುದದು ಪಾತಾಳದೊಳು ಲಂಕೆ (ಕೌಶಿರಾ. ೩೯-೨). [ಕೋಟವಿ + ಪುರ]

**ಕೋಟವೊಕ್ಕಲಿಗ** (ನಾ). ಒಕ್ಕಲಿಗರಲ್ಲಿ ಒಂದು ಪಂಗಡ. ℙ ಅಡಕೆ ಮರಗಳ ಗೊನೆಗಳಿಗೆ ಕೊಟ್ಟೆ ಕಟ್ಟುವ ಕಸುಬಿನ ಒಕ್ಕಲಿಗ: ಕೋಟವೊಕ್ಕಲಿಗರು – ಇವರು ಶಿರಸಿ, ಶಿದ್ಧಾಪುರ ತಾಲ್ಲೂಕುಗಳಲ್ಲಿ ಇರುತ್ತಾರೆ. ಅಡಿಕೆ ಗೊಂಚಲುಗಳಿಗೆ ಚೀಲುಮಾಡಿ ಹಾಕುವ ಹೋರೆಯನ್ನು ಮಾಡುತ್ತಿರುವ ಕಾರಣ ಇವರಿಗೆ ಈ ಹೆಸರು ಬಂದಿದೆ (ಕಭಾಗೆ. ೧೪೪). [ಕೋಟ$_{2}$ (< ಕೊಟ್ಟೆ$_{2}$) + ಒಕ್ಕಲಿಗ]

**ಕೋಟಾ$_{1}$** 'ಕೋಟ$_{5}$' ನೋ.

**ಕೋಟಾ$_{2}$** (ನಾ). ಕರುಳು: (ಶ).

[← ಪ್ರಾ. ಕೋಠಾ. < ಸಂ. ಕೋಷ್ಠ]

**ಕೋಟಾಚಕ್ರ** (ನಾ). ಕೋಟೆಯ ಮಂಡಲ, —ಸುತ್ತು: ಜಳಧಿ ಜಂಬೂದ್ವೀಪಮಂ ಸುತ್ತಿ ಸೌಂದರಮಾಗಿರ್ಪವೊಲಿರ್ಪ್ಪುದಪ್ರತಿಮ ಕೋಟಾಚಕ್ರಮಂ ಸುತ್ತಿ . . . ನಿರಂತರ ಕಾಂತಂ ಪರಿಖಾಂತರಂ (ಪುಷ್ಪಪು. ೨-೬೨); ಆ ಪೊಜವೊಳಲ ಅಂತರಾಳದೊಳಿರ್ಪುದೊಂದು ಕೋಟಾಚಕ್ರಮಂತರಿಕ್ಷವ ಚುಂಬಿಸುತ (ಕುರಾಸಾಂ ೪-೮೫); ಮೆಜೆವ ಕೋಟಾಚಕ್ರಭವಕಾಂತಿ ಮುಂಬರಿದು ತರಣಿ ಶಶಿ ಸಪ್ತಾರ್ಚಿತೇಜಂಗಳಂ ದಿವದಲಿರಿಸಿರ್ಪ ದೀಪಗಳ ದೆಸೆಯನೀವುತಲಿರ್ದುದು (ವೆಂಕಾರಾ.೧-೪-೯).

[< ಸಂ. ಕೋಟಚಕ್ರ]

**ಕೋಟಾಯಂತ್ರ** (ನಾ). ಕೋಟೆಯನ್ನು ಭೇದಿಸುವ ಯಂತ್ರ, —ಉಪಕರಣ: ನೊಣೆಯುಲ್ ಸುಂಗಲಿಳಾತಳಂ ಮುರಿದು ಮುರಿಟ್ಟಂತೆ ದುರ್ಗಕ್ಕೆ ನಿಚ್ಚಣಿ ಸಾರ್ಚುದೊಲೆ . . . ಪಡಿಗೋಂಟೆಯೆಂಬ ಬಹು ಕೋಟಾಯಂತ್ರಸಾಮಗ್ರಿ ತಿಂತಿಣಿಗೊಂಡಾಂತಿರೆ (ಅನಂಪು. ೧೧-೮೩).

[< ಸಂ. ಕೋಟಯಂತ್ರ]

**ಕೋಟಾರ** 'ಕೊಟ್ಟಾರ$_{1}$' ನೋ.

**ಕೋಟಾವಲಯ, ಕೋಟಾವಳಯ** (ನಾ). = ಕೋಟಾಚಕ್ರ: ಬರಬರುತೆ ದರ್ಶನಕಗುರ್ವಿದುದು ಪರ್ವತಂಬೋಲ್ ಬಂಡೆ ಬಂಡೆಯ ಮಸೆದು ಬೆಸೆದು ಕೋಟಾವಲಯಭಿತ್ತಿ (ಶ್ರೀರಾಮಾ. ೪೬೩-೪೯೪). **ಕೋಟಾವಳಯ:** ನಿಲುವೆವಿಲ್ಲಿ ವಿರೋಧಿ ಸಂತತಿಯುಲುಹನಾಲಿಸ ಬಹುದು ಕೋಟಾವಳಯವಿದೆ ಹತ್ತಿರೆಯೆನುತ ಗುರುಸೂನು ರಥವಿಳಿಯೆ (ಕುಮ್ಯಾಗ. ೯-೨); ಪೊಳಲದಮರಾವತಿಗೆ ಪೋಗೆ[ಪಾಠಾಂ. ತೊಲೆ, ಮಿಗೆ] ವೆಗ್ಗಳವೆನಲು ರಂಜಿಸಿತು ಕೋಟಾವಳಯ ಕೊತ್ತಳದಾಳುವೇರಿಯ ವಿವಿಧ ರಚನೆಯಲಿ (ತೊರರಾ. ೪-೧೦-೧೬). [< ಸಂ. ಕೋಟವಲಯ]

**ಕೋಟಾವಳಯ** 'ಕೋಟಾವಲಯ' ನೋ.

**ಕೋಟಾವಳಿ** (ನಾ). ಕೋಟೆಗಳ ಸಾಲು, —ಪಂಕ್ತಿ: ಧಗಧಗಿಪ ಕೋಟಾವಳಿಯ ಹೊಗರೊಗುವ ಹೇಮದ ಕೊತ್ತಳಂಗಳ (ನಳಚ.೬–೨೫). [ಕೋಟೆ$_3$ + ಆವಳಿ$_1$ (= ಆವಲಿ)]

**ಕೋಟಿ$_1$** (ನಾ). ೧. ಕೊನೆ; ತುದಿ; ಅಗ್ರ; ಕೋಡು: ಆಪ್ತಂ ಜಿನಂ ಕೇವಲ ವಿಪುಲ ತುಲಾಕೋಟಿಯಿಂ ತೂಗೆ ತನ್ನಂ (ಪಂರಾಮಾ. ೧–೪೨); ಶ್ರೀಕಾಂತಮದ್ವಿಷರ್ ಸ್ವಭ್ರೂಕೋಟಿಯ ಪರ್ಬಿನಿಂದವಪ್ಪರ್ ಕಿಡುವರ್ (ಜಗವಿ. ೪–೧೦೪). ೨. ತರಗತಿ; ವಿಭಾಗ; ವರ್ಗ: ಇವನು ಮನುಷ್ಯ ಕೋಟಿಗೆ ಸೇರಿದವನೇನಲ್ಲ (ರೂಢಿ). ೩. ಆಕ್ಷೇಪಣೆ; ಮೂದಲಿಕೆ: ಭೋಜನ ಮಾಡುತ್ತಿರುವಾಗ ಎರಡೂ ಪಕ್ಷದ ಸ್ತ್ರೀಯರು ಪರಸ್ಪರರ ಮೇಲೆ ಕೋಟಿಗಳನ್ನು ಮಾಡಿ ಭೂಮದ ಹಾಡು ಹಾಡಹತ್ತಿದರು (ತುಳಸಿ. ೩೨). ೪. ಅಸಂಖ್ಯವಾದದ್ದು; ಲೆಕ್ಕವಿಲ್ಲದ್ದು; ಅಪರಿಮಿತವಾದದ್ದು: ಉದಾತ್ತನಾರಾಯಣನಾದ ದೇವನೆಮಗೀಗಳಕೇಸರಿ ಸೌಖ್ಯಕೋಟಿಯಂ (ಪಂಪಭಾ. ೧–೧); ಹಾಲುತುಪ್ಪದ ಕೋಟಿ ಕೊಪ್ಪರಿಗೆಯಂತಲ್ಲಿ ಸಮೆದು ಶಿವಲಿಂಗಕ್ಕೆ ಕಂಪಿಡುತ್ತಿರೆ ಕಂಡು (ಬಸರ. ೭–೧೬); ಒಡಲೊಳಬುಜಭವಾಂಡ ಕೋಟಿಯುನಡಗಿಸಿಪ್ಪ ಮಹಾಮಹಿಮಗಾಯ್ತು ಡಕ ತೊಟ್ಟಿಲೊಳ ಮಮ ನಿಗಮಾಳಿಗಳು ಬೆಜಗಾಗೆ (ತೊರರಾ. ೧–೮–೭೩); ಎಲ್ಲಮ್ಮನ ಭಕ್ತ ಕೋಟಿಯೆ ಇದಕ್ಕೆ ಸಾಕ್ಷಿ (ಕರ್ನಾಟ. ೨೩); ಕೋಟಿಭಾಗ್ಯವಿದ್ದವನಾದರೂ ಕಡೆಗೆ ಕಾಡಿನಲ್ಲೇ ಇರಿಸುತ್ತಾರೆ (ಗಾದೆ). ೫. ಮೂಲೆ; ಕೋಣ: "ಅಣಿಃ, ಅಶ್ರಿಃ, ಕೋಟಿಃ, ಅಶ್ರಃ, ಕೋಣಃ – ಈ ೫ ಗೋಟು" (ಹಲಾಯು. ೧೨೦–೪೨). ೬. ಕಣ್ಣಿನ ತುದಿ, —ಕೊನೆ: (ಕಿ). ೭. ಕತ್ತಿಯ ಅಲಗು, —ಬಾಯಿ. ೮. ಬಿಲ್ಲಿನ ತುದಿ; ಕೊಪ್ಪು. ೯. ಪ್ರಾಧಾನ್ಯ; ಶ್ರೇಷ್ಠತೆ. ೧೦. ಒಡವೆ; ಅಲಂಕಾರ. ೧೧. ಮನಸ್ಸಿನ ಉಲ್ಲಾಸ; ಸಂತೋಷ. ೧೨. ಮರದ ಪೊಟರೆ; ಬಿಲ. ೧೩. ಕೈಯ ಬಳೆ, —ಕಡಗ. ೧೪. ಸಮರ; ಯುದ್ಧ. ೧೫. ಒಂದು ಸಂಖ್ಯೆ; ನೂರುಲಕ್ಷ: ವೈದಿಕರಪ್ಪ ವೇದವಿತ್ತುಗಳೊಂದು ಕೋಟಿಗೆ ಅನ್ನವನಿಕ್ಕಿದ ಫಲಕ್ಕೆ ಕೋಟಿ ಮಿಗಿಲು ಶಿವಶರಣಂಗೆ ಒಂದು ಭಿಕ್ಷವನಿಕ್ಕಿದ ಫಲ (ಆದವ. ೨೨); ಪತ್ತಿ ಮೂಜೆೞ್ ಕೋಟಿಯುದು ಕೈವರ್ತಿಸಿತು ದಳಪತಿಗೆ (ಕುವ್ಯಾಶ. ೨–೭); ಕೋಟಿವರಹಾ ಕೊಟ್ಟರೂ ಕೋಮಟಿಯ ಸಾಕ್ಷಿ ನಂಬಕೂಡದು (ಗಾದೆ). ೧೬. [ರೇಖಾಗ] ಸಮಕೋನ ತ್ರಿಕೋಣದ ಲಂಬಭುಜ: "ಉತ್ಕರುಷೆಯೊಳು ಧನುವಿನೊಳು ಸಂಖ್ಯೆಯೊಳು ಕೋಟಿಯಕ್ಕು" (ಮಂಗರಾ. ೧೪೨–೧೮); "ಅಗಣಿತಭೂಷಣಂ ಸುರಗಿ ಸೌಂದರ ಕೋಟರ ಚಾಪದಂತ್ಯ ಸಂಯುಗಮನದುತ್ಸವಂ ಗಣನೆಯೆಂಬಿವು ಕೋಟಿ ಸಮಾಹ್ವಯಂ (ನಾನಾರ ೪೪); "ಗುಹೆ ಬಿಲ್ಲಕೊಪ್ಪು ಲೆಪ್ಪೋತ್ಸಹ ರೂಪು ಕಠಾರಿ ಕರಭೂಷಣ ಸಮರಂಗಳ್ ಸಹಜದೊಳೆಂಟು ಪೆಸರ್ ಬಳಿಕಹುದ್ಯೆ ಕೇಳ್ ಕೋಟಿಶಬ್ದಮೆನಿಕುಂ ಜಗದೊಳ್" (ನಾನಾಕಂ. ೮೬).

ಕೋಟಾಕೋಟಿ = ಕೋಟಿಗಟ್ಟಲೆ; ಅಸಂಖ್ಯ: ಪುನರ್ಭವಂಗಳವು ಕೋಟಾಕೋಟಿಗಳ್ ಪಾಜಿ ಬೀಜ್ವಿನೆಗಂ ಪಂದಲೆಗಳ್ (ಪಂರಾಮಾ. ೧೪–೧೬೭); ಮೆಜಿದವು ಗುಡಿ ಕೋಟಾ ಕೋಟಿ ಭೂತಳ ನೆಜೆಯದು ಬೀಡಿಗೆಂದೆನಲು (ಕುರಾಸಾಂ. ೧೯–೫೩). ಕೋಟಾನುಕೋಟಿ, ಕೋಟ್ಯಾನುಕೋಟಿ = ಕೋಟ್ಯಂತರ; ಅಸಂಖ್ಯ: ಹರಿಯಜೇಂದ್ರಾದಿಗಳು ಕೋಟಾನುಕೋಟಿಗಳು ಮರಣವಪ್ಪರು (ವೀಶೈಪು. ೨–೫–೧೪); ಕೋಟ್ಯಾನುಕೋಟಿ ವಿಷ್ಣು ಬ್ರಹ್ಮೇಂದ್ರಾದಿಗಳು ಕಾಲವು ತುಂಬಿದ ಬಳಿಕ ಮರಣವಾಗುವರು; ನನ್ನಿಂದ ಕೋಟಿ ಚಕ್ರವರ್ತಿಗಳಾದರೂ ಸಾಯುವರು (ವೀಶೈಪು. ೨–೫–೧೪ ಟೀಕೆ) [ಸಂ.]

**ಕೋಟಿ$_2$, ಕೋಠಿ$_2$** (ನಾ). ವಸ್ತುಗಳನ್ನು ಕೂಡಿಡುವ ಸ್ಥಳ; ಉಗ್ರಾಣ; ಧಾನ್ಯಾಗಾರ. 'ಕೋಟಿಖೋಲಿ' ಪರಾ. ೨. ಹಾಯಿ ಹಡಗು; ನಾವೆ: ಜಲಮಾರ್ಗದಿಂದ ಮಚವೆದೊಳಗಿಂದ ಅಥವಾ ಕೋಟಿಯದೊಳಗಿಂದ ಕಳುಹಿಸಲಿಕ್ಕೆ ಬರದರೆ ಅದಕ್ಕೆ ಬೀಳುವ ಅಡತಿ (ಮುಂಬವ್ಯಾ. ೨೬೭). ಕೋಠಿ$_2$: ೧. ವಾಠೀಲಿ ಕೋಠಿಯಿಂದ ಎರಡು ಗಂಧದ ತುಂಡು ತಗೊಂಡು ಅಲ್ಲಿಗೇ ಬಂದು ಬಿಡು (ಮಾಂಗಲ್ಯ. ೧೫); ಮಿಕ್ಕ ಎಲ್ಲಾ ಸಾಮಾನುಗಳನ್ನೂ ಸಂಗ್ರಹಿಸಿಟ್ಟ ಅವನ ಕೋಠಿ (ತಕ್ಕಡಿ. ೧೮); ತಮ್ಮ ವ್ಯಾಪಾರಕ್ಕೆ ಅಡ್ಡಿ ಬರುತ್ತಿದ್ದುದನ್ನು ಕಂಡ ಅರಬ್ಬರು ಪೋರ್ಚುಗೀಸರು ತಂಗಿದ್ದ ಮನೆ ಮತ್ತು ಕೋಠಿಯ ಮೇಲೆ ಧಾಳಿ ಮಾಡಿದರು (ಪ್ರವಾಇ. II, ೨೨೫); ಕೋಠೀ ವ್ಯವಸ್ಥಾ ನಿನ್ನ ಕಡಿಗೆ; ನೀ ಬೇಕಾದ್ದು ಮಾಡಿಸಿಬಿಡು ಹೋಗಲಿ (ತಿಡುಗು. ೫೫).
[← ಹಿಂ. ಮರಾ. ಕೋಠೀ. / ಪ್ರಾ. ಕೋಟ್ಟ, ಕೋಟ್ಟಯ; < ಸಂ. ಕೋಷ್ಠ]

**ಕೋಟಿಕ** (ಗು). ೧. ತುತ್ತತುದಿಯ. 'ಕೋಟಿಕಶಿಲೆ' ಪರಾ. (ನಾ). ೨. ತುತ್ತ ತುದಿ; ಶಿಖರ. [ಸಂ.]

**ಕೋಟಿಕಶಿಲೆ** (ನಾ). [ಜೈನ] ಸಿದ್ಧಶಿಲೆ: ತಮ್ಮನುಂ ತಾನುಂ ಅನೇಕ ಕುಲರಾಜ ಸಮಾಜಂಬೆರಸು ಆಡುವ ನೆನದೊಳ್ ಪೋಗಿ ಕೋಟಿಕಶಿಲೆಯಂತೋಜೆ (ಶಾಂತಿಪು. ೫–೨೫ ವ); ಕೋಟಿಕಶಿಲೆಯನೆತ್ತಿದ ಮಹಾಸತ್ವಂ (ಪಂರಾಮಾ. ೧೪–೧೮೮ ವ); ಬರುತ ಬಟ್ಟೆಯೊಳಿರ್ದ ಕೋಟಿಕಶಿಲೆಗಂಡು ನೆರೆದರಸುಗಳೆಂದರು (ವರ್ಧಚ. ೪–೪೮). [ಕೋಟಿಕ + ಶಿಲೆ]

**ಕೋಟಿಖೋಲಿ, ಕೋಠೀಖೋಲಿ** (ನಾ). (ಉಕ) ವಸ್ತುಗಳನ್ನು ಕೂಡಿಟ್ಟ ಕೋಣೆ; ಉಗ್ರಾಣ: ಕೋಟಿಖೋಲಿಯಲ್ಲಿ ಅಕ್ಕನೊಂದಿಗೆ ಚಹಾ ಅವಲಕ್ಕಿಗೆ ಕೂತೆ (ವೈನಿ. ೯). ಕೋಠೀಖೋಲಿ: ದಣಿದು ಬಂದು ಎಲ್ಯ ಜಾಗಾ ಸಿಗದ ನೀವು ಕೋಠೀಖೋಲ್ಯಾಗ ಬಂದು ಮಲಕೊಂಡ್ರಿ (ಸಮಜೀ. ೨೮೨). [← ಹಿಂ. ಮರಾ. ಕೋಠೀಖೋಲೀ]

**ಕೋಟಿಗಾವುಂಡ** (ನಾ). ಒಬ್ಬಾತನ ಹೆಸರು: ಅವರನ್ವಯತಿಳಕಂ ಲೋಕವಿಶ್ರುತಂ ಪಿರಿಯ [ಕೋ]ಟಿಗಾವುಣ್ಡಂ ಸಂಭಾವಿಸಿದಂ (ಸೌಇಇ. XI–i, ೪೫–೯; 980). [ಕೋಟಿ$_1$+ ಗಾವುಂಡ (< ಗಾಮುಂಡ)]

**ಕೋಟಿನಾಳು** (ನಾ). (ಕರಾ) ಹುಟ್ಟಿದ ದಿನದ ವಿವರ ಮತ್ತು ಗ್ರಹಕುಂಡಲಿಯನ್ನು ಒಳಗೊಂಡ ಜಾತಕ; ಜನ್ಮಕುಂಡಲಿ: ಜೋಯಿಸರಿಗೆ ಸಂತಾನವಾಗದಿರಲೇನು ಕಾರಣವೆಂದರಿಯಲು ಕೋಟಿನಾಳು (ಜಾತಕ) ತೋರಿಸಿದರು (ಭ್ರಾಂತಿಸು. ೪). [?]

**ಕೋಟಿಪತ್ರ** (ನಾ). ೧. ದೋಣಿಯನ್ನು ನಡಸುವ ಹುಟ್ಟು: "ಅರಿತ್ರಂ, ಕೋಟಿಪ[ಪಾಠಾಂ. ಪಾ]ತ್ರಂ – ಈ ೨ ನಾವೆಯ ಸೋಗೆ" (ಹಲಾಯು. ೧೧೧–೫೦). ೨. ಹಡಗಿನ ಮುಂಭಾಗ; ಚೂಣಿ: "ಹಡಗಿನ ಮುಖಂ ಕೋಟಿಪತ್ರಮೆನಿಸಿಕ್ಕುಂ" (ಮಂಗರಾ. ೧೨೧–೫). [ಕೋಟಿ$_1$ + ಪತ್ರ]

**ಕೋಟಿಪಾತ್ರ** (ನಾ). = ಕೋಟಿಪತ್ರ ೧: "ಅರಿತ್ರಂ, ಕೋಟಿಪಾ[ಪಾಠಾಂ. ಪ]ತ್ರಂ–ಈ ೨ ನಾವೆಯ ಸೋಗೆ" (ಹಲಾಯು. ೧೧೧–೫೦). [ಕೋಟಿ$_1$ + ಪಾತ್ರ]

**ಕೋಟಿಯೇರಿಸು** (ಕ್ರಿ).. ಆಕ್ಷೇಪಿಸು; ಮೂದಲಿಸು; ಪ್ರತಿವಾದಗಳನ್ನು ಒಡ್ಡು; ತರ್ಕಮಾಡು: ರಂಗನಾಥನು ಮರಾಠೀ ಕವಿಯ ಜಾಡನ್ನು ಹಿಡಿದು "ಲಲಿತವಹ ಕನ್ನಡದ ನುಡಿಯಲಿ ತಿಳಿದು ತನ್ನೊಳು ತನ್ನ ಮೋಕ್ಷವ ಗಳಿಸಿಕೊಂಡರೆ ಸಾಲದೆ? ಸಂಸ್ಕೃತದಲಿನ್ನೇನು?" ಎಂದು ಕೋಟಿಯೇರಿಸಿದನು (ಶಮಪಾಂ. ೯೯). 'ಕೋಠಿ$_1$' ಪರಾ. [ಕೋಟಿ$_1$ + ಏರಿಸು (< ಏಱಿಸು)]

**ಕೋಟಿವರ್ಷೆ** (ನಾ). ಒಂದು ಔಷಧಿಯ ಹೆಸರು: "ಮರುನ್ಮಾಲಾ, . . . ಕೋಟಿವರ್ಷಾ, ಲಂಕೋಯಿಕಾ, ಲಂಕಾಸಿಕಾ – ೧೦ ಸ್ಪೃಕ್ಕವೆಂಬ ಗ್ರಂಥ್ಯದ್ರವ್ಯ; ಸಂಕೇಬೇರು" (ಸಿದ್ಧಾಂತಿ. ೧೨೫). [ಸಂ. ಕೋಟಿವರ್ಷಾ]

**ಕೋಟಿಶ** (ನಾ). (ಹೊಲಗದ್ದೆಗಳಲ್ಲಿ ಹೆಂಟೆಗಳನ್ನು ಒಡೆಯುವ) ಮರದ ಕೊಡತಿ; ಹಲಬೆ: "ಕೋಟಿ[ಪಾಠಾಂ. ಟೀ]ಶಂ, ಲೋಷ್ಟಭೇದನಂ – ಈ ೨ ಹಲಿಕೆ" (ಹಲಾಯು. ೯೪-೪೨೨); "ಹಂಕೆ ಕೋಟಿಶ ಮಕ್ಕು ಲೋಷ್ಟಭೇದಂ" (ಮಂಗರಾ. ೧೦೯-೧). [ಸಂ.]

**ಕೋಟಿಹೊರಿಸು** (ಕ್ರಿ). ಆಪಾದನೆಯನ್ನು ಹೇರು, —ಹೊರಿಸು: ರಾಜನ ಮೇಲೆ ಅವನ ಸ್ನೇಹಿತರು ಕೋಟಿಹೊರಿಸುವುದಕ್ಕೆ ಮೊದಲಾಯಿತು (ನಟಸಾ. ೩೧). [ಕೋಟಿ$_1$ + ಹೊರಿಸು (< ಪೊರಿಸು)]

**ಕೋಟೀರ** (ನಾ). ೧. ಕಿರೀಟ; ಮಕುಟ: "ಕಿರೀಟಂ, ಉಷ್ಣೀಷಂ, ಕೋಟೀರಂ, ಮುಕುಟಂ – ಈ ೪ ಮುಕುಟಂ" (ಹಲಾಯು. ೯೩-೪೧೧); ಶ್ರೀರಮಣಂ ಪುಟ್ಟಿರೆ ಕೋಟೀರಾದ್ಯಾಭರಣ ಚಕ್ರಮುಖ್ಯಾಯುಧ ನಾನಾರಶ್ಮಿಯನು ವಿಜೃಂಭಿಸೆ ರಾರಾಜಿಸಿದತ್ತು ಕೌಸ್ತುಭಂ ಪೇರುರದೊಳ್ (ಜಗವಿ. ೩-೧); ತೇರು ಗಮಿಸುವ ವೇಗಕರಸನ ಚಾರುರತ್ನಸ್ಫುರಿತ ಶಿರಕೋಟೀರ ಕೆಡೆದುದು (ಅಂಬಿಕಾ. ೪೮-೩೧). ೨. ಜಡೆ; ಮುಡಿ: ಸೋಮಕೋಟೀರಭಾರನಂ . . . ತ್ರಿಣೇತ್ರನಂ (ಭಕ್ತಾಜ. ೩-೫೯); ಜಯಜಯ ಸುಧಾಕರ ಕಲಾಕಲಿತ ಕೋಟೀರ (ರಾಜಶೇ. ೧೪-೧೬೯ ವ). [ಸಂ.]

**ಕೋಟೀಶ$_1$** (ನಾ). = ಕೋಟಿಶ: "ಕೋಟೀ[ಪಾಠಾಂ. ಟಿ]ಶಂ, ಲೋಷ್ಟಭೇದನಂ – ೨ ಹಲಿಕೆ" (ಹಲಾಯು. ೯೪-೪೨೨). [ಸಂ.]

**ಕೋಟೀಶ$_2$** (ನಾ). ಕೋಟ್ಯಧೀಶ: ಅವನೊಬ್ಬ ಕೋಟೀಶ (ರೂಢಿ). [ಕೋಟಿ$_1$ + ಈಶ]

**ಕೋಟು$_1$** (ನಾ). ಮೈಗೆ ತೊಟ್ಟುಕೊಳ್ಳುವ ಒಂದು ಬಗೆಯ ದಪ್ಪವಾದ ಉಡುಪು; ಮೇಲಂಗಿ: ಕೋಟುಗಳೇ ಪ್ರಬಲವಾಗಿ ಮುಂಚಿನ ನಿಲುವಂಗಿಗಳು ಎಲ್ಲಿಯೋ ಅಡಗಿದವು (ತೊಳಿಮು. ೭೨); ಕಾಲಿಗೆ ಬಿಳಿ ಇಜಾರು; ಉದ್ದವಾದ ಕಪ್ಪುಕೋಟು; ತಲೆಗೊಂದು ಪಾಗೋಟಿ . . . ಧರಿಸಿದ್ದನು (ನಿಷ್ಕಾಮ. ೨). [← ಇಂ. Coat]

**ಕೋಟು$_2$, ಕೋಟ್** (ನಾ). ಇಸ್ಪೀಟು ಆಟದಲ್ಲಿ ಒಂದು ಬಗೆ. ಪಕ್ಷ ಕಟ್ಟಿ ಆಡುವಾಗ ಒಂದು ಪಕ್ಷದವನು ತನ್ನ ಪ್ರತಿಪಕ್ಷದವರೊಡನೆ ಎಲ್ಲಾ ಎಲೆಗಳನ್ನೂ ಗೆಲ್ಲುವುದು: ಆವರೆಗೂ ಮೂಕವಾಗಿ ನಡೆದ ಆಟ 'ಕೋಟು' 'ಒಕ್ಕೈ'ಗಳು ಒಂದರಮೇಲೊಂದು ಒದಗಿದಾಗ ಒಮ್ಮೆಲೇ ಚತುರ್ಮುಖವಾಗಿ, ಷಣ್ಮುಖವಾಗಿ ಕೆಲೆಯ ಹತ್ತಿತು (ಮೂರುದಾ. ೮). **ಕೋಟ್**: ಇವರ ಜೋಡಿದಾರನು 'ಕೋಟ್' ಎಂದು ಒದರಿದಾಗ ವಿರುದ್ಧಪಕ್ಷದವರ ದಿವಾಳಿಯಾಗಿ ಬಿಟ್ಟಿತ್ತು (ಮೂರುದಾ. ೮). [← ಇಂ. Quote]

**ಕೋಟುಗಸ್ತಿ** 'ಕೋಟುಗಸ್ತು' ನೋ.

**ಕೋಟುಗಸ್ತು, ಕೋಟುಗಸ್ತಿ** (ನಾ). ರಾತ್ರಿಯಲ್ಲಿ ವೇಷ ಬದಲಾಯಿಸಿಕೊಂಡು ಗುಟ್ಟಾಗಿ ತಿರುಗಾಡುವುದು; ಗುಪ್ತವಾಗಿ ಸಂಚರಿಸುವುದು; ಪಹರೆ (?): ಆ ಪಟ್ಟಣದ ದೊರೆಯಾದ ವಿರೋಚನನು ರೂಪವನ್ನು ಮರೆಯಿಸಿಕೊಂಡು ಕೋಟುಗಸ್ತಿಗಾಗಿ ಬರುತಾ ಇವನನ್ನು ಕಂಡು – ನೀನು ಯಾರು ? . . . ಎಂದನು (ನೀತಿಚಂ. V,೬). **ಕೋಟುಗಸ್ತಿ**: ನಿನ್ನೆ ರಾತ್ರೆ ಕಳ್ಳರನ್ನು ಹಿಡಿಯುವುದಕ್ಕೆ ಹೋಗಿದ್ದ ಠಾಣೇದ ಗುರಿಕಾರನು ಊರಲ್ಲಿ ಕೋಟುಗಸ್ತಿ ತಿರುಗುತ್ತಿರುವಾಗ್ಗೆ (ಪೇಟೀಮಾ. ೩೬). [ಕೋಟು ? + ಗಸ್ತು]

**ಕೋಟುರ** (ನಾ). ನೋವು; ಸಂಕಟ (?): ಪೇಳಾರ ಮನಕ್ಕೆ ಕೋಟುರಮನಾಗಿಸದೀ ಭುವನಾಂತರಾಳದೊಳ್ (ಎಇ. XIII, ೩೦೩-೨೪; 1125). [< ಕೋಟರ ?]

**ಕೋಟೆ$_1$** 'ಕೋಂಟೆ' ನೋ.

**ಕೋಟೆ$_2$** (ನಾ). ಒಂದು ಸೀಮೆಯ ಹೆಸರು: ಕೋಟೆಯ ನಿಃ ಮಾರ್ಗ್ಗೇಶ್ವರವುಮನಾಳ್ವ ಶ್ರೀಮನ್ಮಾವಡಿ ಚಿಲ್ಲುಕದೇವ (ಎಕ. IX, ಚನ್ನಪ. ೪೮-೮; 907). [?]

**ಕೋಟೆಕೋಲಾಹಲ** 'ಕೋಂಟೆಕೋಲಾಹಲ' ನೋ.

**ಕೋಟೆಕೋಳಾಹಳ** 'ಕೋಂಟೆಕೋಲಾಹಲ' ನೋ.

**ಕೋಟೆಗಲ್ಲು** (ನಾ). ಕೋಟೆಯ ಗೋಡೆಯ ಕಲ್ಲು; ಪ್ರಾಕಾರದ ಶಿಲೆ: ಮಂಟಪಂ ಬಿರಿಬಿರಿದು ಬಯಲಾಯ್ತು ಬಾಗಿ ಬಿದ್ದುವು ಕೋಟೆಗಲ್ಲುಗಳ್ (ಬಸಪು. ೧೬-೫).
[ಕೋಟೆ$_1$ (< ಕೋಂಟೆ) + ಕಲ್ಲು (< ಕಲ್$_3$)]

**ಕೋಟೆಗಾ** (ಕ್ರಿ). ಕೋಟೆಯನ್ನು ರಕ್ಷಿಸು, —ಕಾಪಾಡು: ಎತ್ತಿದ ಪಂಜುಗಳುರಿವೆಳಗೆತ್ತಂ ಮಿಸುಗುವಿನಮೆಳ್ಚಱಿಳ್ಚಱಿಸುತ್ತಂ ಬಿತ್ತರದಿನಾರ್ದು ತಿರುಗುತೆ ಸುತ್ತಂ ಸಲೆ ಕೋಟೆಗಾದನಚಳಿತ ಧೀರಂ (ವೃಷವಿ. ೧೦-೧೨). [ಕೋಟೆ$_1$ (< ಕೋಂಟೆ) + ಕಾ$_1$]

**ಕೋಟೆಗಾಜು** 'ಕೋಂಟೆಗಾಜು' ನೋ.

**ಕೋಟೆಗಾವಲ್** 'ಕೋಂಟೆಗಾವಲ್' ನೋ.

**ಕೋಟೆಗಾಳಗ** 'ಕೋಂಟೆಗಾಳೆಗ' ನೋ.

**ಕೋಟೆಗಾಳೆಗ** 'ಕೋಂಟೆಗಾಳೆಗ' ನೋ.

**ಕೋಟೆತೆನೆ** 'ಕೋಟೆದೆನೆ' ನೋ.

**ಕೋಟೆದೆನೆ, ಕೋಟೆತೆನೆ** (ನಾ). ಕೋಟೆಯ ಅಗ್ರಭಾಗದಲ್ಲಿರುವ ಬುಗುರಿಯ ಆಕಾರದ ಕಂಡಿಯುಳ್ಳ ರಚನೆ,—ಶಿಲ್ಪ: ಬಿಡದೆ ಸಾವಿರ ಸಂಖ್ಯೆಯೂ ನಿಚ್ಚಣಿಗೆಯ ತೊಡಿಸಿ ತೆಂಕಣ ಕೋಟೆದೆನೆಗೆ (ಕಂಸವಿ. ೧೪-೪೧) ಮುಗಿಲುಮುಟ್ಟಿದ ಕೋಟೆದೆನೆಗಳಿಂ ಕೊನೆಗಳಿಂದಗಳು ಜಲಮತಳಮಂ ಭೇದಿಪುದು (ರುಕ್ಮಾಂಗ. ೩-೪). **ಕೋಟೆತೆನೆ**: ಗಗನವ ಸೋಂಕುವ ಕೋಟೆಕೊತ್ತಲುಗಳು ಬುಗುರಿ ಮಾಟದ ಕೋಟೆತೆನೆಯು (ಸೌಗಂಪ. ೧-೭); (ಕಟ್ಟಡಕ್ಕೆ, ಗೋಡೆಗೆ) ಕಂಡಿಗಳುಳ್ಳ ಕೈಪಿಡಿಗೋಡೆ ಹಾಕು, ಕಟ್ಟು; ಕೋಟೆತೆನೆ ಮಾಡು, ಕಟ್ಟು (Embattle. ಇಂಕನಿ). [ಕೋಟೆ$_1$ (< ಕೋಂಟೆ) + ತೆನೆ$_1$]

**ಕೋಟೆಮನೆ** (ನಾ). ಕೋಟೆಯಿಂದ ಸುತ್ತುವರಿಯಲ್ಪಟ್ಟ ಮನೆ: ಹಿಂದೆ ದುರ್ಗವಾಗಿದ್ದ ಶ್ರೀಮಂತಗೃಹ, ಕೋಟೆಮನೆ (Castle. ಇಂಕನಿ). [ಕೋಟೆ$_1$ (< ಕೋಂಟೆ) + ಮನೆ]

**ಕೋಟೆಮಾನ್ಯ** (ನಾ). ಕೋಟೆಯ ರಕ್ಷಣೆಗಾಗಿ ಕೊಟ್ಟ ಮಾನ್ಯ, —ಭೂಮಿ: ಬಯಿರಗೊಂಡಗೆ ಕೋಟೆಮಾನ್ಯದ ಗದೆ (ಮೈಆರಿ. ೧೯೩೦, ೯೮-೩; 17ನೆಯ ಶತ). [ಕೋಟೆ$_1$ (< ಕೋಂಟೆ) + ಮಾನ್ಯ]

**ಕೋಟೆಮುಗಿಲು** (ನಾ). ಕೋಟೆಯ ಆಕಾರದಲ್ಲಿ ಸುತ್ತುಗಟ್ಟಿದ ಮೋಡ: ಕೋಟೆಮುಗಿಲು, ಕೆಮ್ಮೋಡ, ಬಿಳಿಮೋಡ, ಕಾರ್ಮೋಡ, ಹಿಂಡುಮೋಡ ಇವಿದ್ದು ಚಿಟ್ಟೆಹುಳ ನೆಲ ಕಚ್ಚದೆ ಹಾರಾಡಿದರೆ ಮಳೆ ತಕ್ಕೊಳ್ಳಿ, ಕುರ್ತೇಟು ಬಂತು (ಹುಟ್ಟಿಹ. ೧೪೩). [ಕೋಟೆ$_1$ (< ಕೋಂಟೆ) + ಮುಗಿಲು (< ಮುಗಿಲ್)]

**ಕೋಟೆಯಮ್ಮ** (ನಾ). ಒಬ್ಬಾತನ ಹೆಸರು: ಉತ್ತರಾಯಣ ಸಂಕ್ರಾನ್ತಿಯನ್ದು ಕೋಸಿಗರ ಕೋಟೆಯಮ್ಮಂ ಗೋಸಹಸ್ರಮಾಬ್ದಿಂ (ಮೈಆರಿ. ೧೯೨೯, ೭೮-೧೨; 964). [ಕೋಟೆ$_1$ (< ಕೋಂಟೆ) + ಅಮ್ಮ$_1$]

**ಕೋಟೆವೞಿ** (ನಾ). ಕೋಟೆಯ ಹತ್ತಿರದ ನೆಲ; ದುರ್ಗದ ಪ್ರದೇಶ: ಜೆಟ್ಟಿಗರ ವೀರರಸಮಂ ನೆಟ್ಟನೆ ತೂಗಲ್ಕೆ ದಿಟ್ಟಿದೊಲೆಯಿಂದಿದಟರ್ ಕಟ್ಟಿದ ಕಟ್ಟಳೆಯೆನಿಸಿದುದಿಟ್ಟಳಮೆನೆ ಕೋಟೆವೞಿಯ ಸೆಱಿಗೆಯ್ದಾೞಿಗಳ್ (ಪಾರ್ಶ್ವಪು. ೩-೧೩೨). [ಕೋಟೆ$_1$ (< ಕೋಂಟೆ) + ಬೞಿ$_2$]

**ಕೋಟೆವಿರಿ** (ನಾ). ಕೋಟೆಯ ಬಿರುಕು, —ಸೀಳು: ನಾಡ ಕೊಳ್ಳಿಗೆ ಹರಿದು ತಲೆ ಹೋಗಾಡಿವಂತವನಲ್ಲ ಮೇಹಿಂಗಾಡ ಬಂದಿಲಿ ಕೋಟೆವಿರಿ [ಪಾಠಾಂ. ಕೋಟೆನಿಱಿ]ಯಲಿ ಸಿಕ್ಕಿ ಪಡಿವಂತೆ (ಬಸವು. ೫೮-೯೪).
[ಕೋಟೆ$_1$ (< ಕೋಂಟೆ) + ಬಿರಿ$_2$]

**ಕೋಟೇಶ್ವರ** (ನಾ). (ಕರಾ) ೧. ಒಂದು ಊರಿನ ಹೆಸರು. ೨. ಬ್ರಾಹ್ಮಣರ ಒಂದು ಪಂಗಡ; ಆ ಪಂಗಡಕ್ಕೆ ಸೇರಿದವನು: ಕೋಟೇಶ್ವರ ಬ್ರಾಹ್ಮಣರು, ಕುಂದಾಪುರ ತಾಲ್ಲೂಕಿನ ಕೋಟೇಶ್ವರವೆಂಬ ಗ್ರಾಮದಲ್ಲಿ ವಾಸಿಸುವರು (ತುಳುನಾ. ೧೪೫). [ಕೋಟೆ$_1$+ ಈಶ್ವರ]

**ಕೋಟ್ಟೆ** 'ಕೋಂಟೆ' ನೋ.

**ಕೋಟ್ಟವಳ** 'ಕೊತವಾಲ' ನೋ.

**ಕೋಟ್ವಾರಿ** 'ಕೊಟ್ವಾರಿ' ನೋ.

**ಕೋಟ್ಟೆ** 'ಕೋಂಟೆ' ನೋ.

**ಕೋಟ್ಟೆಱ** (ನಾ). ಒಬ್ಬಾತನ ಹೆಸರು: ತೋಟ್ಟಮುಂ ಮನೆತ್ತಾನಮುಂ ಚನ್ದ್ರಸೇನಾಚಾರ್ಯರ್ಕೆ ಉದಪೂರ್ವಂ ಕೊಟ್ಟಾರ್ ಆದರ್ಕೆ ಸಾಕ್ಷಿ ಕೋಟ್ಟೆಱರುಂ ಕಾರೆಆಱುಕುಂ (ಮೈಆರಿ. ೧೯೭೫, ೧೦೬-೩೬ ; ?). [?]

**ಕೋಟ್ಯಂತರ** (ಗು). ಕೋಟಿಗಟ್ಟಲೆಯ; ಲೆಕ್ಕವಿಲ್ಲದ; ಅಸಂಖ್ಯವಾದ: ಹಿಡಿಮಂದಿಯ ಭೋಗ ವೈಭವಗಳ ರಕ್ಷಣೆಗಾಗಿ ಕೋಟ್ಯಂತರ ಜನರ ರಕ್ತಶೋಷಣೆ ದುಃಖಸಂಕಟಗಳನ್ನು ಜಾಗರೂಕತೆಯಿಂದ ಬಚ್ಚಿಡುತ್ತಿದ್ದ (ಪುನರು. ೩೨೬). [ಕೋಟಿ$_1$ + ಅಂತರ]

**ಕೋಠ** 'ಕೊಟ್ಟ' ನೋ.

**ಕೋಠಾರ** 'ಕೊಟ್ಟಾರ$_1$' ನೋ.

**ಕೋಠಿ$_1$** (ನಾ). ಪ್ರಶ್ನೆ; ಸವಾಲು: ಗಾನರಸಕ್ಕೆ ಮಾತ್ರವೇ ಈ ಸಂಬಂಧವನ್ನು ಹೇಳುವುದಕ್ಕೆ ಕಾರಣವೇನು? ಎಂದು ಕೋಠಿಮಾಡಿದರೆ, ಉತ್ತರವನ್ನು ಚೆನ್ನಾಗಿ ಯೋಚಿಸಿ ತಿಳಿದುಕೊಳ್ಳಬೇಕಾಗಿದೆ (ಕಾಂಪೂಹ. ೧೨); ಆದರ ಮೇಲೆ ನೀನು ಇನ್ನಾವ ಕೋಠಿ ಹಾಕುತ್ತೀಯೆ? ಎಂದು ಕೇಳಿದನು (ಕೊನಪ್ಪೈ. ೧೨೨); ದರ್ಭೆಗೇನು ನಮ್ಮ ಮನೆಯಲ್ಲಿ ಬರ ಬಂದಿದೆಯೇನೆ? ಒಂದು ಹಸು ಮೇಯುವಷ್ಟು ಇವೆಯಲ್ಲಾ . . . ಎಂದು ವೆಂಕಮ್ಮ ಅದಕ್ಕೂ ಒಂದು ಕೋಠಿಹಾಕಿ ಮಾತಿಗೆ ಮಾತು ಜೋಡಿಸುತ್ತಿದ್ದರು (ರಾಗಿಣಿ. ೩). [< ಸಂ. ಕೋಟಿ]

**ಕೋಠಿ$_2$** 'ಕೋಟೆ$_2$' ನೋ.

**ಕೋಠೀಖೋಲಿ** 'ಕೋಟೆಖೋಲಿ' ನೋ.

**ಕೋಡ$_1$** 'ಕೋಡಗ' ನೋ.

**ಕೋಡ$_2$** (ನಾ). ಕಾಡುಹಂದಿ; ಸೂಕರ: "ಮಿಗಯೆಕ್ಕಲ ಕೋಡ" (ಕವಿಕಂ. ೬೧); ಕೊ[ಕೋ]ಡ ಕೂರಂಗಿ ಮರೆ ಹುಲ್ಲೆ (ಶ್ರೀಪಾಲ. ೭-೧೬).
[< ಸಂ. ಕ್ರೋಡ]

**ಕೋಡ$_3$** (ನಾ). ಕೊಂಕು; ಬಾಗು; ವಕ್ರ. 'ಕೋಡವೆ' ಪರಾ. [?]

**ಕೋಡಂಗಿ, ಕೋಡಗಿ, ಕೋಡಿಂಗ, ಕೋಡಿಗ** (ನಾ). ೧. ಯಕ್ಷಗಾನ, ಬಯಲಾಟ, ನಾಟಕ ಮತ್ತು ಸರ್ಕಸ್ಸುಗಳಲ್ಲಿ ವಿಕೃತ ವೇಷವನ್ನು ಧರಿಸಿ ಅಭಿನಯಿಸುವ ಹಾಸ್ಯಪಾತ್ರ; ವಿದೂಷಕ; ಹಾಸ್ಯಗಾರ; ನಕಲಿ: ಹಳೆಯವನು ಬಿದ್ದ ಹೊಸಹೊಸಬ ಗೆದ್ದ, ಕೋಡಂಗಿ ನಡುವೆ ಎದ್ದ. ನವೋನವದ ಬಯಲಾಟ ಭಾರಿ ತಾಂಡವವೆ ರಾಷ್ಟ್ರದುದ್ದ (ಅರಳು. ೪೨೭); ಕೋಡಂಗಿ ಆಗಲೇ ತೆರೆಯಾಚೆ ಬಂದನಯ್ಯ (ಜಂಡೆಮ. ೨೨-೪); ದೇವರಿಗೆತ್ತಿದ ಆರತಿಯೊಂದಿಗೇನೆ ಕೋಡಂಗಿಯರು ಭಾಗವತರೊಡನೆ ಸ್ತುತಿಪಾಠ ಮಾಡುತ್ತ ರಂಗಸ್ಥಳವನ್ನು ಸೇರಬೇಕು (ಯಕ್ಷಬ. ೪೧); ಸರ್ಕಸ್ಸಿನಲ್ಲಿ ಅಂಗಚಲನೆಯ ಚಮತ್ಕಾರ ಸಾಮರ್ಥ್ಯವನ್ನು ತೋರುವ ಕಲಾವಿದನನ್ನು ಅನುಕರಿಸಿ ಮೂರು ಉರುಳಾಗುವ ಕೋಡಂಗಿಯಂತೆ (ಬಂಕಿಮ. ೩೫೦). ೨. ಅವಿವೇಕಿ; ಮೂರ್ಖ: ಕೊಟ್ಟೋನು ಕೋಡಂಗಿ ಇಸ್ಕೊಂಡೋನು ಈರಭದ್ರ (ಗಾದೆ). ೩. ಕುರೂಪಿ: ಈ ಕೋಡಂಗಿಯನ್ನು ಎಲ್ಲಿಂದ ಹುಡುಕಿ ತಂದರೋ . . . ಚಂದ್ರಭಾಗಿಗೆ ಶೋಭಿಸುವ ಹುಡುಗನೇ ಅಲ್ಲ (ಮೂರುದಾ. ೬೫). **ಕೋಡಗಿ**: ೧. ಆ ಕೋಡಗಿ ಕಾಡ ಕೂಡಿ ಕುರವಿಯಾಗಿರ್ದುದು (ಪುಣ್ಯಾಸ್ರ. ೪-೫೩ವ). **ಕೋಡಿಂಗ**: ೨. 'ಕೊಟ್ಟವನು ಕೋಡಿಂಗ, ತೆಗೆದುಕೊಂಡವನು ವೀರಭದ್ರ' ಎಂಬ ಗಾದೆಯಂತೆ (ಕಾಸೂರು. ೪೧೨). **ಕೋಡಿಗ**: ೧. ಬೊಂಬೆಗಳಾಟಗಳಲ್ಲಲ್ಲಿ ಪಾತ್ರ ನಿತಂಬಿನಿಜನಗಳಲ್ಲಲ್ಲಿ ಡೊಂಬರಗಳೆಯ ಸಂಗಡಿಗರು ಕೋಡಿಗರಿಂಬುಗೊಂಡಿರ್ದರಲ್ಲಲ್ಲಿ (ಭರಚ. ೨೦-೩೫). ೨. ಪುಸ್ತಕವ ಹಿಡಿದುಕೊಂಡು ಪುರಜನವ ಮೆಚ್ಚಿಸುವ ಕೋಡಿಗರಂತೆ (ಘನವ. ೩೪-೭); ರಾಮನಾಥಾರ್ಯಗಳ್ವಾಳ್ವ ಕೋಡಿಗರ ವಿದ್ಯೆಯಂ ಜೋಡಿಸಿದನೆನಲ್ (ಏಕೋಪು ೯-೩೩); ಗೊಲ್ಲರ ಗೊರವರ ಗೋಪತಿಗಳ ಬಲುಮಲ್ಲರ ಮಾಸಾಳುಗಳ ಕೊಲ್ಲಟಿಗರ ಕೋಡಿಗರ ಕೇರಿಗಳು ಲೆಕ್ಕವಿಲ್ಲದೆಸೆವವಱೊಳಗೆ (ರಾಮವಿ. ೩-೪೧); ಕೋಡಿಗನೋ ವಿಡಾರ್ಯನೋ ಕೋವಿದ ಮುಗ್ಧರದೇವನೊ (ಹಮ್ಮೀರ. ೬-೫೦).

**ಕೋಡಂಗಿಯಾಟ** = ಹಾಸ್ಯಗಾರನ ಅಭಿನಯ; ಕೋತಿಯಾಟ; ವಕ್ರಚೇಷ್ಟೆ: ಕೋಡಂಗಿಯಾಟವನಾಡಿದ ಭಕ್ತಂಗೆ ಬೇಡಿತ್ತನೀವ ನಮ್ಮ ಕೂಡಲಸಂಗಮದೇವ (ಬಸವ. ೧೯೪).

[ದೇ. ‖ ತಮಿ. ಕೋಣಙ್ಗಿ; ಮಲ. ಕೋಡಙ್ಗಿ; ತುಳು. ಕೊಡಂಗ್ಯೆ; ತೆಲು. ಕೋಣಂಗಿ, ಕೋಡಿಗ]

**ಕೋಡಂಗಿತನ** (ನಾ). ನಕಲಿ; ಕಪಿಚೇಷ್ಟೆ; ಹಾಸ್ಯ: (೬).
[ಕೋಡಂಗಿ + – ತನ]

**ಕೋಡಂಗುರಿ** (ನಾ).(?): ಮರೆ ಹಂದಿ ಹುಲ್ಲೆ ಹುಲಿ ಕಡವೆರಲೆಯುಮಾಬೆಕ್ಕು ತೋಳನೆಯ್ ಸಾರಂಗಂ ಕರಡಿ ಮೊಲಂ ಕೋಡಂಗುರಿ ನರಿ ದರಿ ಕೂರಂಗಿ ಬೆಕ್ಕು ಹೇರುಡು ಕಾಕಂ (ಸೂಕ್ತಿಸು. ೩-೧೪೯). P. ಇದು ಕೊಂಡಗುಱಿ ಎಂಬುದರ ಅಪಲಿಖಿತವಿರಬಹುದು.

**ಕೋಡಂಬವಳಿ** (ನಾ). ಒಂದು ಊರಿನ ಹೆಸರು (?): ಅತ್ರ ಸಿರಿಸಿದಯನ ಬರಹ ಯಿಕ್ಕೆ ನಿಂಮ ಕೋಡಂಬವಳಿಯಿಂದ ಪೊಕ್ಕಲು ಬಂದು (ಎಕ. XIV, ಮಳವ. ೧೪೫-೪೯; ?). [?]

**ಕೋಡಂಬೆ** (ನಾ). (?): ಪಡಹದ ಪಿಲುಕುಱಿಯೆ ಕೊಳಂಬೆಯ ಕೊಕಂಬದ ಕೋಡಂಬೆಯ ಮುಡಿಗೆಯ ತಾಣಂಗಳೊಳ್ ಮೇದು ಮೆಯ್ವೆರ್ಚ . . . ಕೊಟಕಿಟ್ಟಾಡುವ ಮೃಗಂಗಳೊಳ್ (ಅನಂಪು. ೧೧-೩೯ ವ). [?]

**ಕೋಡಕಯ್** 'ಕೋಡಕೆಯ್' ನೋ.

**ಕೋಡಕೆಯ್, ಕೊಡಕ್ಕೈ, ಕೋಡಕಯ್, ಕೋಡಕ್ಕೈ** (ನಾ). ಒಂದು ಬಗೆಯ ಆಯುಧ (?): ಅಳವನಱಿಯದೆ ಕೆಣಕಿ ತಹ ಮುಂಕೊಳಿಸಿ ಕದನವ ಕೋಡಕೆಯ್ಯ [ಪಾಠಾಂ. ಕೈಯ] ವರಳವಿ ಗೊಟ್ಟರೆ ನೋಡಿ ಸಿಡಿಮಿಡಿಗೊಂಡು (ಕುವ್ಯಾಭೀ. ೪-೩೫). **ಕೊಡಕ್ಕೈ**: ಕೊಂದನು ಕೊಡಕ್ಕೈಯೊಳು ಬಂದೆಸುವ ಬಿಲ್ಲ ಮಂದಿಯ ಮುಂದೆ ಸಂದಣಿಸಿ (ಕುರಾಸಾಂ. ೪೪-೧೨೦).

**ಕೋಡಕಯ್ :** ಕೋಡಕಯ್ಯ[ಪಾಠಾಂ. ಕೈ]ಲಿ ತಿರುಗಿ ಕೃಪ ಕೈಮಾಡಿದನು ಕೃತವರ್ಮನೆಸುಗೆಯ ತೋಡುಬೀಡಿನ ಭರವ ಬಲ್ಲವರಾರು ಸಮರದಲಿ (ಕುವ್ಯಾಗ. ೨-೬). **ಕೋಡಕೈ₁ :** ಸಬಳಿಗರು ಕೋಡಕೈ [ಪಾಠಾಂ.ಡುಗೈ]ಯೊಳು ನಿಂದರು(ಸೋಮಚ.೫-೨೬); ಇವರು ಕಳುಹಿದ ರುಚಿತದಲಿ ನಿನ್ನವರು ಮಸಗಿದ ಕಡಲವೊಲು ಬಲುದವಕಿಗರು ಕೋಲಳವಿಗೊಂಡರು ಕೋಡಕೈಗಳಲಿ(ಕುವ್ಯಾಕ.೧೫-೧೬); ಚಲಿಸಿತರನೆಲೆ ಕೋಡಕೈಯಲಿ ಮೊಳಗಿದವು ನಿಸ್ಸಾಳ (ಕುವ್ಯಾದ್ರೋ. ೧೨-೨೬) ; ಸೆಳೆದ ನಿಷುಧಿಯಲಂಬ ತಿರುವಿಗೆ ತುಳುಕಿ ಕೋಲನು ಕೋಡಕೈಯಿಂದಳವಿ ಗೊಯ್ಯನೆ ನಿಲುಕಿದನು ನಿಗುರಿದ ಶರೀರದಲಿ(ತೊರರಾ. ೩-೮-೬೯).

[ಕೋಡ್ಕ₀ + ಕೆಯ್₂]

**ಕೋಡಕೈ₁** 'ಕೋಡಕೆಯ್' ನೋ.

**ಕೋಡಕೈ₂** 'ಕೋಡುಗೈ' ನೋ.

**ಕೋಡಗ, ಕೊಡಗ₁, ಕೋಡ, ಕೋಡುಗ (ನಾ).** ೧. ಕೋತಿ ಮಂಗ; ಮರ್ಕಟ: "ವನೌಕಸಂ ಮರ್ಕಟಂ . . . ಹರಿ ಕೀಶಮಾ ಕೋಡಗಕ್ಕೆ ಪೆಸರಕ್ಕು" (ಮಂಗರಾ. ೪೮-೯) ; ವೈದ್ಯಂ . . . ನರ್ಮದಾ ನದೀತೀರದೊಳ್ ಕೋಡಗಮಾಗೆ ಪುಟ್ಟಿದೊಂ (ವಡ್ಡಾರಾ. ೧೬೨-೭) ; ಕರಿಪತಿಯನೇಱಿ ಕೋಡಗಮಿರೆ ಕಂಡುದಱಿಂದೆ (ಆದಿಪು. ೧೫-೩೪); ನಿಲಲಾಱದೆ ಸುಂಟದಿಂದ ಕೋಡಗದಂತು ಮ್ಮಳಿಸಿ ಕಳವಳಿಸಿ (ಧರ್ಮಾಮೃ.೧-೧೪೧); ಕೋಡಗಗಳಂತೆ ಪಲುಗಿರಿದು (ಬಸರ. ೮-೧೦೧); ಕೋಡಗದ ಮೊಗಸಿರಿಗೆ ಕಾವಲಿಯೋಡು ಕನ್ನಡಿಯಾಯ್ತು (ಕುವ್ಯಾಕ. ೯-೧೫). ೨. ಕಪಿ ಸ್ವಭಾವದವನು ; ಚಪಲಬುದ್ಧಿಯುಳ್ಳವನು: ಲಂಚಲಂಚನ್ನುಗಳ ನೀಡುತಿರಬೇಕು ಕೋಡಗರಿಗೂ ಕೋಡಂಗಿಗಳಿಗೂ (ಅರಳು. ೩೪೮) ; ಊರಿಗೆಲ್ಲಾ ಒಂದೇ ಬಟ್ಟೆ, ಕೋಡಗನಿಗೆ ಬೇರೆ ಬಟ್ಟೆ (ಗಾದೆ). **ಕೊಡಗ₁ :** ೧. ಕೊಡಗ ಪಣ್ಣನಿತ್ತಲ್ಲದು ತಿನ್ನದು (ವರ್ಧಜ ೨-೧೧) ; ಕೊಡಗದ ಮೂಳೆಯುಂ ವೃಕ್ಷಗಳ ಬೇರಿನಲ್ಲಿ ಗೂಟದಂತೆ ಬಡಿದರೆ (ಸೌಗಂಧಿ. ೪೩೬-೧೪) ; ಅಲ್ಲೊಂದು ಕೊಡಗನು ಸೇರಿ, ಆ ಪಕ್ಷಿಗಳ ಗೂಡನ್ನು ಕೆಡಿಸಿ, ತತ್ತಿಗಳ ಒಡೆದು ನಾಶಮಾಡುತ್ತಿತ್ತು (ಕಸಾರ. ೧೮). **ಕೋಡ :** ೧. ಕೋಡಂಗಳ ನಗಿಸುವ ರವಮೆ ನಗದ ನಾಲ್ಕುಂದೆಸೆಯೊಳ್ (ಎಇ. XVI, ೩-೫ ; 980) ; ಕೋಡಂಗಳ ದ್ರಿಯುಂ ತಂದೀಡಾಡಿದೊಡೆಯ್ದೆ ಶರಧಿಯಂ ಕಟ್ಟಿದುವಾರೂಧಿಯು ರಾಮುಂ ಲಂಕೆಗೆ ಕೋಡಂ[ಪಾಠಾಂ. ಕೋಡಗ]ಗಳುವೆರಸಿ ಪೋಗಿ ಗಡ ಸಾಧಿಸಿದಂ (ಸಮುಪ. ೧೦-೧೪೬) ; ಬಿಸಿಲ್ಗಾದುದೊಂದು ಮರದ ಕೋಡೊಳ್ ಕೋಡಂ (ಜಗವಿ. ೧೪-೧೧). ೩. ಹಾಸ್ಯ ; ನಕಲಿ ; ತಮಾಷೆ : ಸಾಕು ಮಾವ, ಕೋಡ ಮಾಡುತ್ತೀಯಾ (ಶ್ರೀರಾಪ. ೨೨). **ಕೋಡುಗ₁ :** ೧. 'ಕೋಡುಗವೊಗ' ಪರಾ.

[ದೇ. ‖ ತಮಿ. ಕೋಟರ ; ತುಳು. ಕೊಡಂಗು, ಕೊಡಂಜ, ಕೊಡಂಜಿ]

**ಕೋಡಗಕಟ್ಟು** 'ಕೋಡಗಗಟ್ಟು' ನೋ.

**ಕೋಡಗಕೆಮ್ಮು(ನಾ).** ಒಂದು ಬಗೆಯ ಕೆಮ್ಮು; ನಾಯಿಕೆಮ್ಮು : ಶಿಶುಗಳಿಗೆ ಕೋಡಗಕೆಮ್ಮು (ಕಾಳರಾ. ೧೨೦). [ಕೋಡಗ + ಕೆಮ್ಮು]

**ಕೋಡಗಗಟ್ಟು, ಕೋಡಗಕಟ್ಟು (ನಾ).** ಸ್ವಲ್ಪವೂ ಅಲ್ಲಾಡಲಾಗದಂತಹ ಬಿಗಿಯಾದ ಬಂಧನ ; ಹೆಡಮುರಿಗೆ : ಸಿಂಹಕೀರ್ತಿಯಂ ಗ್ರಾಮಸಿಂಹವುಂ ಕಟ್ಟುವಂತೆ ಕೋಡಗಗಟ್ಟಂ ಕಟ್ಟಿತಂದು (ಧರ್ಮಾಮೃ. ೯-೧೪೩); ಮಲೆವವರಂ ಕೋಡಗಗಟ್ಟಂ ಕಟ್ಟಿ ತರ್ಪೆವು (ಕಬ್ಬಿರಾ.೧೩೯). **ಕೋಡಗಕಟ್ಟು :** ದಕ್ಷನಂ ಹಿಡಿದು ಕೋಡಗಕಟ್ಟ ಕಟ್ಟುತಂ (ವೀರರ. ೪೮೯). [ಕೋಡಗ + ಕಟ್ಟು₁]

**ಕೋಡಗಗಟ್ಟುಕಟ್ಟು** 'ಕೋಡಗಗಟ್ಟುಗಟ್ಟು' ನೋ.

**ಕೋಡಗಗಟ್ಟುಗಟ್ಟಿಸು (ಕ್ರಿ).** ಕೋಡಗಗಟ್ಟನ್ನು ಕಟ್ಟಿಸು : ಕೋಡಗಗಟ್ಟುಗಟ್ಟಿಸನೆ ವಾರಿಧಿಯೊಳ್ ಪಿಡಿದೊತ್ತಿ ಜೀವಮುಲ್ಲಾಡೆ ತೊಡಂಗಿ ನೂಂಕಿಸನೆ . . . ಲೋಕಮುಗುರ್ವಿಸಲೆನ್ನ ವಿದ್ಯೆಯಿಂ (ಧರ್ಮಾಮೃ. ೯-೧೮೦). [ಕೋಡಗಗಟ್ಟು + ಕಟ್ಟಿಸು]

**ಕೋಡಗಗಟ್ಟುಗಟ್ಟು, ಕೋಡಗಗಟ್ಟುಕಟ್ಟು (ಕ್ರಿ).** ಕೋಡಗಗಟ್ಟನ್ನು ಕಟ್ಟು ; ಹೆಡಮುರಿಗೆ ಬಿಗಿ : ಆ ದ್ರುಪದನಂ ಗಡ ಕೋಡಗಗಟ್ಟುಗಟ್ಟಿ ತಂದಣೆಯಿರಮೊಪ್ಪಿಸು (ಪಂಪಭಾ. ೨-೬೧); ಕೋಲ್ವೇಡ ಪಿಡಿದು ಕೋಡಗಗಟ್ಟುಗಟ್ಟಿಕೊಂಡೆನ್ನಲ್ಲಿಗೆ ತನ್ನಿಂ (ಧರ್ಮಾಮೃ. ೧೩-೧೨೨) ; ಕೋಡಗಗಟ್ಟುಗಟ್ಟಿ ಹಲಿ ಕೃಷ್ಣರನಾಳಿಸಿ ತಾಳವಟ್ಟದೊಳ್ ಮೂಡಿದ ಹಾಹೆಯಂತೆಚಲೆ . . .ಬೀರಪಬಟ್ಟಿಗೆ ಕೈದುಗಟ್ಟದೇಂ (ಅನಂಪು. ೧೩-೭೯); ಅಂದು ದ್ರುಪದನನೆಯಿದಿ ವಿಕ್ರಮದಿಂದ ಕೋಡಗಗಟ್ಟುಗಟ್ಟಿಯೆತಂದು ಅಗ್ರಜಗೊಪ್ಪಿಸಿದನು(ಸಾಳ್ವಭಾ ೨೨-೨೭). **ಕೋಡಗಗಟ್ಟುಕಟ್ಟು :** ಕೊಲ್ವೆಂ ಧುರದಲ್ಲಿ ನಿಂದೊಡೊಳಸಾರ್ದೊಡೆ ಕೋಡಗಗಟ್ಟು[ಪಾಠಾಂ. ಟ್ಟಿ]ಕಟ್ಟುವೆಂ (ಪಾರ್ಶ್ವಪು. ೨-೧೮); ವಿಧಿಪಾಶ ವಾಕ್ಷಣ ಕೋಡಗಗಟ್ಟುಕಟ್ಟಿತು ಪಡಿಗ ಕೋಪದಿ ಬಂದು ಗದೆಯಲಿ ಹೊಯ್ದು ಕಿಡಿ ಚೆಲ್ಲೆ (ಕೌಶಿರಾ. ೧೧-೪೦). [ಕೋಡಗಗಟ್ಟು + ಕಟ್ಟು₁]

**ಕೋಡಗವಾಡು (ಕ್ರಿ).** ಕೋತಿಯಂತೆ ಆಡು ; ಮಂಗಚೇಷ್ಟೆ ಮಾಡು : ಏಳು ಕಡಲಿನ ಮೇಲೆ ಮುಱಿವರು ಕೀಲ ಕಳೆವರು ರವಿಯ ಬಂಡಿಯ ಬೀಳಲಿಡುವರು ಚಂದ್ರಬಿಂಬವ ಬ್ರಹ್ಮನಿದಿರಾಗಿ ಕೀಳುಗೋಡಗವಾಡುತಿರ್ಪರು ಕೀಳುನುಡಿಯಲಿ ಸುರರನೆಲ್ಲರ ಬೀಳುಗುಟ್ಟುವರಿದಿರಬಂದರೆ ಭೂಪ ಕೇಳೆಂದ (ಸಂಭಪ. ೭-೧೮). [ಕೋಡಗ + ಆಡು₁]

**ಕೋಡಗಿ** 'ಕೋಡಂಗಿ' ನೋ.

**ಕೋಡಣಸು (ನಾ).** ದನಕರುಗಳ ಕೊಂಬಿಗೆ ಅಳವಡಿಸುವ ಲೋಹದ ಗೊಣಸು, —ಅಣಸು : ಕೋಡಣಸು ಮುಖರಂಭ ಜಂಗು ಘಂಟೆಯು ಗೆಜ್ಜೆ ಜೋಡಿಸಿದ ಝಲ್ಲಿಮುತ್ತಿನಜೌಕ ಶೃಂಗರವ ಮಾಡಿ ನಿಂದಿರ್ದ ಶ್ರೀವೃಷಭರಾಜನನುಯಾರೋಹಣಂಗೆಯ್ಯೆ (ನವಮೋ. ೨೨-೫೦) ; ಹುತ್ತದ ಮಣ್ಣು ತಂದು ಕೆತ್ತಿ ಬಸವನ ಮಾಡಿ ಚಿತ್ರದ ಕೋಡಣಸು. . .ಮುತ್ತಿನ ಬಾಸಿಂಗ ಒಪ್ಪುವದು (ಲೋಕಗೀ. ೧೯೬-೩) ; ಚಿನ್ನದ ಕೋಡಣಸು ಬೆಳ್ಳಿಯ ಕಟ್ಟಿನ ಗೊರಸುಗಳುಳ್ಳ ಸಾವಿರ ಹಸುಗಳನ್ನು . . . ದಾನ ಕೊಡಬೇಕು (ಸಂಪೋತ. ೧೬೦).

[ಕೋಡು₅ + ಅಣಸು₂]

**ಕೋಡಬಳೆ** 'ಕೋಡುಬಳೆ' ನೋ.

**ಕೋಡಮುರಕಿ (ನಾ).** ಒಂದು ಜಾತಿಯ ಗಿಡ : "ಕೋಡಮುರಕಿ (ಕಾಳಾಕುಡಾ) : ಸಣ್ಣಗಿಡ, ಕಟ್ಟಿಗೆ ಬಿಳೇದು, ಗಟ್ಟಿ" (ಕಭಾಗ. ೩೮).

[?]

**ಕೋಡಮುರು** 'ಕೋಡಮುರುಕ' ನೋ.

**ಕೋಡಮುರುಕ, ಕೋಡಮುರು (ನಾ).** ಒಂದು ಬಗೆಯ ಜೋಳ : ಹುಬ್ಬೀ ಮಳೆಯಲ್ಲಿ ಕೋಡಮುರುಕನ ಜೋಳ ಮುಂತಾದ ಜೋಳವನ್ನು ಬಿತ್ತಬೇಕು (ಕೃಷಿಪ್ರ. ೮೦). **ಕೋಡಮುರು :** ಸೂರ್ತಿ ಚಪಾಳಾ ಮಣದ ಮೇಲೆ ಕಿಮ್ಮತ್ತು ಇರತಕ್ಕ ಜೀನಸುಗಳು - ೧ ಅಕ್ಕಲ ಖಾರ, ಹಲಕಿ (ಸಂಬಂಧ) . . . ೫೧ ಕೋಡಮುರು (ಮುಂಬವ್ಯಾ. ೧೨೪). [?]

**ಕೋಡಮೆ (ನಾ).** ಕೊಂಕದಿರುವುದು ; ವಕ್ರತೆಯಿಲ್ಲದಿರುವುದು ; ಋಜು ಸ್ವಭಾವ : ಕೇಡುಂ ಸಮೃದ್ಧಿಯುಂ ಇಲ್ಲದುವಲ್ಲ ಮನದೊಳ್ ಕೋಡಮೆಯೆ ಸಂಪನ್ನಗೊರ್ಡಮೆ (ಕುಜಳ್. ೧-೧೨-೫).

[ಕೋಡ್ಕ₈ + -ಅಮೆ]

